CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೨೦, ೨೦೦೪ (ವೈಶಾಖ ೩೦, ಶಕ ವರ್ಷ ೧೯೨೬) | ಸಂಚಿಕೆ ೨೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಶ್ರೀ ಪಿ.ಜಿ.ಸುದ್ದಿ, ಡಿವೈ.ಎಸ್.ಪಿ.ಬಳ್ಳಾರಿ ಗ್ರಾಮಾಂತರ ಉಪ ವಿಭಾಗ ಹಾಗೂ ಶ್ರೀ ಬಿ.ಪ್ರಭಾಕರ್, ಸಿಪಿಐ, ಬಳ್ಳಾರಿ ಗ್ರಾಮಾಂತರ ವೃತ್ತ ಇ ವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
೧) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ರವರ ಆದೇಶ ಸಂಖ್ಯೆ:ಸಿಬ್ಬಂದಿ-೨/ಪಿಆರ್/೧/೨೦೦೧-೦೨ ಓಬಿ ಸಂ.೨೦೦೧ ದಿನಾಂಕ:೧೩-೧೧-೨೦೦೧.
೨) ಅರ್ಜಿದಾರರ ಶ್ರೀ ಪಿ.ಜಿ.ಸುದ್ದಿ ರವರ ಮನವಿ ದಿನಾಂಕ:೮-೩-೨೦೦೨ ಮತ್ತು ಶ್ರೀ ಪ್ರಭಾಕರ್ ರವರ ಮನವಿ ದಿನಾಂಕ:೬-೩-೨೦೦೨.
೩) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಸಿಬಿಜಿ/೧೦/೨೦೦೨-೦೩ ದಿನಾಂಕ: ೨೬-೧೨-೨೦೦೨.

**ಪ್ರಸ್ತಾವನೆ:**

ಶ್ರೀ ಪಿ.ಜಿ.ಸುದ್ದಿ, ಡಿವೈ.ಎಸ್.ಪಿ. ಬಳ್ಳಾರಿ ಗ್ರಾಮಾಂತರ ಉಪವಿಭಾಗ ಹಾಗೂ ಶ್ರೀ ಪ್ರಭಾಕರ್, ಸಿಪಿಐ, ಬಳ್ಳಾರಿ ಗ್ರಾಮಾಂತರ ವೃತ್ತ ರವರುಗಳ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೭ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:-**

ಬಳ್ಳಾರಿ ಗ್ರಾಮಾಂತರ ಠಾಣೆ ಗುನ್ನೆ ಸಂ.:೧೧೬/೨೦೦೦ ಕಲಂ ೩೦೨ ಐಪಿಸಿ ಪ್ರಕರಣದಲ್ಲಿ ಆರೋಪಿಗಳಾದ ಪ್ರಕಾಶ್, ಪ್ರಸಾದ್, ಸತ್ಯನಾರಾಯಣ ಮತ್ತು ಗನಿರಾಜ ಇ ವರುಗಳು ಸದರಿ ಪ್ರಕರಣದಲ್ಲಿ ಜಾಮೀನು ಪಡೆಯಲು ತಡೆಗಟ್ಟುವಲ್ಲಿ ವಿಫಲರಾಗಿದ್ದು, ಆರೋಪಿಗಳು ಹೊರ ಬರಲು ಅವಕಾಶ ಮಾಡಿಕೊಟ್ಟು ನಿಮ್ಮಗಳ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುತ್ತೀರಿ.

ಮೇಲ್ಕಂಡ ದೋಷಾರೋಪದ ಬಗ್ಗೆ ಅರ್ಜಿದಾರರು ಇ ಬ್ಬರ ಸಮಜಾಯಿಷಿಗಳನ್ನು ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಐಜಿಪಿ, ಪೂರ್ವ ವಲಯ, ದಾವಣಗೆರೆ ರವರು ಸಂಖ್ಯೆ:ಪಿಆರ್ ೧/೨೦೦೧-೦೨ ಓಬಿ ನಂ.೧೧೦/೨೦೦೧ ದಿನಾಂಕ: ೧೩-೧೧-೨೦೦೧ರಲ್ಲಿ ಅರ್ಜಿದಾರರು ಇ ಬ್ಬರ ವೇತನಗಳನ್ನು ಸಂಚಿತಪರಿಣಾಮರಹಿತವಾಗಿ ಒಂದು ವರ್ಷ ಕಾಲ ಮುಂದೂಡಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರುಗಳು ಇ ಬ್ಬರೂ ಪ್ರತ್ಯೇಕವಾಗಿ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಅವುಗಳನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅವರಿಬ್ಬರ ಒಂದೇ ವಾದವೆಂದರೆ ಅವರಿಬ್ಬರ ವಿರುದ್ಧ ಜಂಟೀ ಇ ಲಾಖಾ ವಿಚಾರಣೆಯನ್ನು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೭ರಡಿ ನಡೆಸಿರುತ್ತಾರೆ. ಆದರೆ ಸದರಿ ನಿಯಮಾನುಸಾರ ಜಂಟೀ ಇ ಲಾಖಾ ವಿಚಾರಣೆಯನ್ನು ನಡೆಸಲು ಅವಕಾಶವಿರುವುದಿಲ್ಲ ಎಂದು ನಿಯಮ ೭ರಡಿ ಜಂಟೀ ಇ ಲಾಖಾ ವಿಚಾರಣೆಯನ್ನು ನಡೆಸಬಾರದೆಂದು ನಿಯಮವಿಲ್ಲ. ಅವರ ಮೇಲಿನ ಆರೋಪವನ್ನು ಅಲ್ಲಗಳೆಯುವಂತಹ ಅಂಶಗಳನ್ನು ಇ ಬ್ಬರು ಅರ್ಜಿದಾರರೂ ಮಂಡಿಸಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೬೬ ಪೊಸಿಅ ೨೦೦೨, ಬೆಂಗಳೂರು, ದಿನಾಂಕ:೨೪ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಜಿ.ಸುದ್ದಿ, ಡಿವೈ.ಎಸ್.ಪಿ. ಬಳ್ಳಾರಿ ಗ್ರಾಮಾಂತರ ಉಪ ವಿಭಾಗ ಹಾಗೂ

ಶ್ರೀ ಪ್ರಭಾಕರ್, ಸಿಪಿಐ, ಬಳ್ಳಾರಿ ಗ್ರಾಮಾಂತರ ವೃತ್ತ ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 466

**ವಿಷಯ:** ಶ್ರೀ ಡಿ.ಮುನಿಯಪ್ಪ, ಪಿಎಸ್ಐ, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಅರ್ಜಿ ಬಗ್ಗೆ.

**ಓದಲಾಗಿದೆ:**
೧) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬಳ್ಳಾರಿ ಜಿಲ್ಲೆ ರವರ ಆದೇಶ ಸಂಖ್ಯೆ:೨೧೦/ಪಿಆರ್/೨೦೦೦ ಜಿ.ಆ.ಸಂ.೩೩೪/೨೦೦೦-೦೧ ದಿನಾಂಕ:೨೬-೧-೨೦೦೧.
೨) ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ರವರ ಆದೇಶ ಸಂಖ್ಯೆ: ಅಪೀಲು(೧)೨೦೦೧-೦೨ ಓಬಿ ಸಂ.೨೪/೨೦೦೨ ದಿನಾಂಕ:೧೩-೫-೨೦೦೨.
೩) ಅರ್ಜಿದಾರರ ಮನವಿ ದಿನಾಂಕ:೯-೫-೨೦೦೩.
೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು೨/೨೪/ ೨೦೦೩-೦೪ ದಿನಾಂಕ:೧೭-೧೧-೨೦೦೩.

**ಪ್ರಸ್ತಾವನೆ:**

ಶ್ರೀ ಮುನಿಯಪ್ಪ, ಪಿಎಸ್ಐ (ಕಾನೂನು ಮತ್ತು ಸುವ್ಯವಸ್ಥೆ) ಕೌಲ್ ಬಜಾರ್ ಪೊಲೀಸ್ ಠಾಣೆ, ಬಳ್ಳಾರಿ ಜಿಲ್ಲೆ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ರವರ ವಿರುದ್ಧ "ಕೌಲ್ ಬಜಾರ್ ಠಾಣೆ ವ್ಯಾಪ್ತಿಯಲ್ಲಿ ಮಟ್ಕಾ ಜೂಜು ಪಡೆಯುವಲ್ಲಿ ವಿಫಲರಾಗಿ ಕರ್ತವ್ಯ ವಿಮುಖತೆ" ಪ್ರದರ್ಶಿಸಿದ ಆರೋಪದ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೭ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

೨. ಮೇಲ್ಕಂಡ ಆರೋಪದ ಬಗ್ಗೆ ಶಿಸ್ತು ಪ್ರಾಧಿಕಾರಿ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದೇ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮ ರಹಿತವಾಗಿ ೨ ವರ್ಷ ಕಾಲ ತಡೆಹಿಡಿದು ಆದೇಶ ಹೊರಡಿಸಿರುತ್ತಾರೆ.

೩. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಹುರುಳಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

೪. ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಬಳ್ಳಾರಿ ನಗರದ ಎಲ್ಲಾ ಠಾಣೆ ವ್ಯಾಪ್ತಿಯಲ್ಲಿ ಮಟ್ಕಾ ಜೂಜು ನಡೆಯುತ್ತಿದ್ದರೂ ತನ್ನ ವಿರುದ್ಧ ಮಾತ್ರ ಶಿಸ್ತು ಕ್ರಮ ಕೈಗೊಳ್ಳಲಾಗಿದೆ. ತಾನು ೧೦೨ ಪ್ರಕರಣಗಳನ್ನು ದಾಖಲಿಸಿದ್ದೇನೆ.

ಆದರೂ ಡಿಎಸ್‌ಪಿ ರವರು ಗುರ್ತಿಸಿಲ್ಲ ಎಂದು ವಾದಿಸಿರುತ್ತಾರೆ. ಆದರೆ ನಗರದಲ್ಲಿ ಜೂಜು ನಡೆಯುತ್ತಿರುವ ಬಗ್ಗೆ ತಾನೇ ಒಪ್ಪಿಕೊಂಡಿದ್ದು ತಡೆಗಟ್ಟುವಲ್ಲಿ ವಿಫಲರಾಗಿರುವುದು ಡಿವೈಎಸ್‌ಪಿ ರವರು ಪ್ರಕರಣಗಳು ದಾಖಲಿಸಿರುವುದರಿಂದ ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಅರ್ಜಿದಾರರ ವಾದಾಂಶಗಳಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡು ಬರದೇ ಇ ರುವುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೮೭ ಪೊಸಿಅ ೨೦೦೨, ಬೆಂಗಳೂರು, ದಿನಾಂಕ: ೨೭ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಮುನಿಯಪ್ಪ, ಪಿಎಸ್ಐ (ಕಾನೂನು ಮತ್ತು ಸುವ್ಯವಸ್ಥೆ) ಬಳ್ಳಾರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 467

**ವಿಷಯ:** ದಿನಾಂಕ: ೧೧.೩.೨೦೦೨ರಂದು ಬೆಳಗಾಂ ಕೇಂದ್ರ ಕಾರಾಗೃಹದಲ್ಲಿ ವಿಚಾರಣಾ ಬಂದಿ ಸಂಖ್ಯೆ:೨೯೭೦ ಗಜಾನನ ಬಾಪು ನವಗೇಕರ್ ಈತನು ಕರ್ತವ್ಯ ನಿರತ ಸಿಬ್ಬಂದಿಯ ಮೇಲೆ ಹಲ್ಲೆ ನಡೆಸಿದ ಬಗ್ಗೆ ವಿಚಾರಣೆ ನಡೆಸುವ ಕುರಿತು.

**ಓದಲಾಗಿದೆ:**
೧. ಪೋಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ:ವಿಚಾರಣೆ:ಸಿಆರ್-೫೦:೨೦೦೧,ದಿನಾಂಕ ೧೮-೧೨-೨೦೦೨.
೨. ಕಾರಣ ಕೇಳುವ ನೋಟೀಸ್ ಸಂಖ್ಯೆ:ಒಸಾಇ ೧೨೪ ಪಿಆರ್ಇ ೨೦೦೨ ದಿನಾಂಕ:೨೬.೮.೨೦೦೩
೩. ಶ್ರೀ.ಪಿ.ಎಂ.ವೆಂಕಟರಾಯಪ್ಪ ಸಹಾಯಕ ಅಧೀಕ್ಷಕ ರವರ ಪ್ರತಿ ರಕ್ಷಾಣಾ ಹೇಳಿಕೆ ದಿನಾಂಕ:೧೭.೯.೨೦೦೩
೪. ಶ್ರೀ.ಎಸ್.ಎಂ.ಪಾಟೀಲ್, ಸಹಾಯಕ ಅಧೀಕ್ಷಕ (ಸ್ವ.ಪ್ರ) ರವರ ಪ್ರತಿ ರಕ್ಷಾಣಾ ಹೇಳಿಕೆ ದಿನಾಂಕ: ೧೯.೧೨.೨೦೦೩.

**ಪ್ರಸ್ತಾವನೆ**

ಮೇಲೆ ಓದಲಾದ ಕ್ರಮ ಸಂಖ್ಯೆ (೧)ರ ದಿನಾಂಕ ೧೮-೧೨-೨೦೦೨ರ ಪತ್ರದಲ್ಲಿ ಪೋಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರು ದಿನಾಂಕ:೧೧-೩-೨೦೦೨ ರಂದು ಬೆಳಗಾಂ ಕೇಂದ್ರ ಕಾರಾಗೃಹದಲ್ಲಿ ವಿಚಾರಣಾ ಬಂದಿ ಸಂಖ್ಯೆ:೨೯೭೦ ಗಜಾನನ ಬಾಪು ನವಗೇಕರ್ ಎಂಬುವವನು, ಕರ್ತವ್ಯ ನಿರತ ವಾರ್ಡರ್ ಶ್ರೀ.ಮಂಜುನಾಥ ಇ ವರ ಮೇಲೆ ಹಲ್ಲೆ ನಡೆಸಿದ ಬಗ್ಗೆ, ಬೆಳಗಾಂ ವಲಯದ ಕಾರಾಗೃಹಗಳ ಉಪ ಮಹಾ ನಿರೀಕ್ಷಕರಾಗಿದ್ದ ಶ್ರೀ.ಬಿ.ಎಸ್.ಅಬ್ಬಾಯಿ ಇ ವರು

ಪ್ರಾರಂಭಿಕ ತನಿಖೆ ನಡೆಸಿ ದಿನಾಂಕ: ೨೦.೩.೨೦೦೨ರಂದು ಸಲ್ಲಿಸಿದ ವರದಿ ಮತ್ತು ಬೆಳಗಾವಿಯ ಜಿಲ್ಲಾಧಿಕಾರಿಗಳು ಸಲ್ಲಿರುವ ವರದಿಯನ್ನು ಪರಿಶೀಲಿಸಿ, ಶ್ರೀ.ಪಿ.ಎಂ. ವೆಂಕಟರಾಯಪ್ಪ, ಸಹಾಯಕ ಅಧೀಕ್ಷಕ ಹಾಗೂ ಶ್ರೀ.ಎಸ್.ಎಂ. ಪಾಟೀಲ್, ಸಹಾಯಕ ಅಧೀಕ್ಷಕ(ಸ್ವ.ಪ್ರ) ಇ ವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಶಿಫಾರಸ್ಸು ಮಾಡುತ್ತಾ ಶ್ರೀಯುತರುಗಳ ವಿರುದ್ಧ ಆರೋಪಗಳ ಪಟ್ಟಿಯನ್ನು ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೨)ರ ದಿನಾಂಕ:೨೬.೮.೨೦೦೩ರ ಕಾರಣ ಕೇಳುವ ನೋಟೀಸ್ ನಲ್ಲಿ ಶ್ರೀ.ವೆಂಕಟರಾಯಪ್ಪ, ಸಹಾಯಕ ಅಧೀಕ್ಷಕ ಹಾಗೂ ಶ್ರೀ ಎಸ್.ಎಂ.ಪಾಟೀಲ್, ಸಹಾಯಕ ಅಧೀಕ್ಷಕ (ಸ್ವ.ಪ್ರ) ರವರುಗಳು ಕೇಂದ್ರ ಕಾರಾಗೃಹ, ಬೆಳಗಾಂ ಇ ಲ್ಲಿ ಕರ್ತವ್ಯ ನಿವಹಿಸುತ್ತಿದ್ದಾಗ ಸದರಿ ಜಿಲ್ಲೆಯ ಜಿಲ್ಲಾಧಿಕಾರಿಗಳು ಹಾಗೂ ಪೋಲೀಸ್ ಅಧೀಕ್ಷಕರು ಅನಿರೀಕ್ಷಿತ ಬೇಟಿ ನೀಡಿದಾಗ ಕಾರಾಗೃಹದಲ್ಲಿ ಸೆಲ್ ಪೋನ್‌ಗಳ ಬಳಕೆ ಹಾಗೂ ಇ ನ್ನಿತರ ಕಾನೂನು ಬಾಹಿರ ಚಟುವಟಿಕೆಗಳು ಕಂಡು ಬಂದಿದ್ದು, ಇ ದರಿಂದ ಅವರುಗಳ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ಸಾಭೀತಾಗಿದೆಯೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, ೧೯೫೭ರ ನಿಯಮ ೧೧ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇ ಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ ಶ್ರೀಯುತರ ವಿರುದ್ಧದ ನಿರ್ದಿಷ್ಟವಾದ ಮತ್ತು ಸ್ಪಷ್ಟವಾದ ದುರ್ನಡತೆಗಳ ಆರೋಪಗಳ ವಿಷಯಗಳ ಪಟ್ಟಿಯನ್ನು ಲಗತ್ತಿಸಲಾಗಿದೆ. ಹಾಗೂ ಸದರಿ ಆರೋಪಗಳ ವಿರುದ್ಧ ಪ್ರತಿವಾದದ ಲಿಖಿತ ಹೇಳಿಕೆಗಳನ್ನು ಸಲ್ಲಿಸಬೇಕಾದಲ್ಲಿ ಪತ್ರ ತಲುಪಿದ ೧೫ ದಿನಗಳೊಳಗಾಗಿ ತಮ್ಮ ಅಹವಾಲನ್ನು ಸಲ್ಲಿಸುವಂತೆ ನಿರ್ದೇಶನ ನೀಡಲಾಗಿದೆ. ಇ ಲ್ಲವಾದಲ್ಲಿ ನಿಯಮಾನುಸಾರ ನಿಮ್ಮ ಪ್ರತಿವಾದವೇನು ಇ ಲ್ಲವೆಂದು ಪರಿಗಣಿಸಲಾಗುವುದಾಗಿ ಸಹ ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೩)ರ ದಿನಾಂಕ: ೧೭.೯.೨೦೦೩ರ ಪತ್ರದಲ್ಲಿ ಶ್ರೀ ಪಿ.ಎಂ.ವೆಂಕಟರಾಯಪ್ಪ, ಸಹಾಯಕ ಅಧೀಕ್ಷಕ ರವರು ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುತ್ತಾ, ಉದ್ದೇಶಿಸಲಾಗಿರುವ ಇ ಲಾಖೆ ವಿಚಾರಣೆಯನ್ನು ಕೈಬಿಡಬೇಕೆಂದು ವಿನಂತಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೪)ರ ದಿನಾಂಕ ೧೯.೧೨.೨೦೦೩ರ ಪತ್ರದಲ್ಲಿ ಶ್ರೀ. ಎಸ್.ಎಂ.ಪಾಟೀಲ್, ಸಹಾಯಕ ಅಧೀಕ್ಷಕ ರವರು ತಮ್ಮ ವಿರುದ್ಧದ ಮಾಡಿರುವ ಆರೋಪಗಳನ್ನು ಪೂರ್ಣವಾಗಿ ಅಲ್ಲಗೆಳೆಯುತ್ತಾ ನನ್ನ ಮೇಲಿನ ಆರೋಪಗಳಿಂದ ಮುಕ್ತಗೊಳಿಸಬೇಕೆಂದು ವಿನಂತಿಸಿರುತ್ತಾರೆ.

ಇ ಲಾಖಾ ಮುಖ್ಯಸ್ಥರು ಕಳುಹಿಸಿರುವ ಪ್ರಸ್ತಾವನೆಯೊಂದಿಗೆ ಹಾಗೂ ದಿನಾಂಕ:೨೬.೮.೨೦೦೩ರಂದು ಹೊರಡಿಸಲಾದ ಕಾರಣ ಕೇಳುವ ನೋಟೀಸ್‌ಗೆ ಆಪಾದಿತ ಸರ್ಕಾರಿ ಅಧಿಕಾರಿಗಳು ಮಂಡಿಸಿರುವ ಪ್ರತಿ ರಕ್ಷಣಾ ಹೇಳಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ ಸದರಿ ಹೇಳಿಕೆಗಳಲ್ಲಿ ಮಂಡಿಸಿರುವ ಅಂಶಗಳನ್ನು ಪರಿಗಣಿಸಲು ಸಕಾರಣಗಳಿಲ್ಲವೆಂದು ತೀರ್ಮಾನಿಸಿ, ಹಾಗೂ ಸದರಿ ಪ್ರಕರಣದ ಬಗ್ಗೆ ಸತ್ಯಾಸತ್ಯತೆಗಳನ್ನು ಕಂಡುಕೊಳ್ಳಲು ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಸಾಇ ೧೨೪ ಪಿಆರ್‌ಇ ೨೦೦೨, ಬೆಂಗಳೂರು, ದಿನಾಂಕ: ೪ನೇ ಮೇ ೨೦೦೪**

ಶ್ರೀ.ಪಿ.ಎಂ.ವೆಂಕಟರಾಯಪ್ಪ ಸಹಾಯಕ ಅಧೀಕ್ಷಕರು ಮತ್ತು ಶ್ರೀ.ಎಸ್.ಎಂ.ಪಾಟೀಲ, ಸಹಾಯಕ ಅಧೀಕ್ಷಕರು (ಸ್ವತಂತ್ರ್ಯ ಪ್ರಭಾವ) ಇ ವರ ವಿರುದ್ಧ ಇ ವರುಗಳ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಬಗ್ಗೆ ಇ ಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, ೧೯೫೭ರ ನಿಯಮ ೧೧(೨)ರಲ್ಲಿನ ಅಧಿಕಾರವನ್ನು ಚಲಾಯಿಸಿ ಶ್ರೀ.ಎನ್.ಜಯರಾಮಯ್ಯ , ಕಾರಾಗೃಹಗಳ ಉಪ ಮಹಾ ನಿರೀಕ್ಷಕರು, ಕೇಂದ್ರ ಕಛೇರಿ, ಬೆಂಗಳೂರು ರವರನ್ನು ``ವಿಚಾರಣಾಧಿಕಾರಿಯನ್ನಾಗಿ`` ಹಾಗೂ ೧೯೫೭ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ ೧೧(೫)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಸಿ.ಪಾಪಯ್ಯ ಪತ್ರಾಂಕಿತ ವ್ಯವಸ್ಥಾಪಕರು ಇ ವರನ್ನು ``ಮಂಡಣಾಧಿಕಾರಿ``ಯನ್ನಾಗಿ ನೇಮಿಸಲಾಗಿದೆ.

ಸದರಿ ವಿಚಾರಣೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ೨ ತಿಂಗಳೊಳಗಾಗಿ ವಿಚಾರಣೆಯನ್ನು ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಬೇಕೆಂದು ಸಹ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 468

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಸೆರೆಮನೆ ಮತ್ತು ಸಿನಿಮಾ).

**ವಿಷಯ:** ಶ್ರೀ ಕೆ.ನಾಗಪ್ಪ, ಪಿಎಸ್‌ಐ, ಸಂಚಾರಿ ಅರಣ್ಯ ದಳ, ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** ೧) ಸೂಪರಿಂಟೆಂಡೆಂಟ್ ಆಫ್ ಪೋಲೀಸ್, ಶಿವಮೊಗ್ಗ ಜಿಲ್ಲೆ ರವರ ಆದೇಶ ಸಂಖ್ಯೆ:ಸಿಬ್ಬಂದಿ(೪)ಶಿಕ್ಷೆ/೧೬೪/೨೦೦೧ ಓಬಿ ೪೦೨/೨೦೦೧-೦೨ ದಿನಾಂಕ:೬-೧೨-೨೦೦೧.

೨) ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಪೂರ್ವ ವಲಯ, ದಾವಣಗೆರೆ ರವರ ಆದೇಶ ಸಂಖ್ಯೆ:ಅಪೀಲು/೫೫/೨೦೦೨-೦೩ ಓಬಿ ಸಂಖ್ಯೆ:೧೫೦/೨೦೦೩ ದಿನಾಂಕ:೧೫-೨-೨೦೦೩.

೩) ಅರ್ಜಿದಾರರ ಮನವಿ ದಿನಾಂಕ:೧೨-೫-೨೦೦೩.

೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು(೨)೪೭/೨೦೦೩-೦೪ ದಿನಾಂಕ:೧೮-೧೦-೨೦೦೩.

**ಪ್ರಸ್ತಾವನೆ:**

ಶ್ರೀ ಕೆ.ನಾಗಪ್ಪ, ಪಿಎಸ್‌ಐ, ಸಂಚಾರಿ ಅರಣ್ಯ ದಳ, ಶಿವಮೊಗ್ಗ ಜಿಲ್ಲೆ ರವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಡವಳಿ) ನಿಯಮಾವಳಿ ೧೯೬೫ರ ನಿಯಮ ೭ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪಣ:**

ದಿನಾಂಕ:೨೬-೮-೨೦೦೧ರಂದು ಶಿವಮೊಗ್ಗ ಭರ್ಮಪ್ಪ ನಗರದ ಗಣಪತಿ ಮೆರವಣಿಗೆಯು ಎಂ.ಕೆ.ಕೆ.ರಸ್ತೆಯ ಮಲಬಾರ್ ಮಸೀದಿ ಹಾಗೂ ಗಾಂಧಿಬಜಾರ್‌ನ ಜಾಮಿಯಾ ಮಸೀದಿಯ ಮುಂದೆ ಹಾಯ್ದು ಹೋಗುವ ಸಮಯದಲ್ಲಿ ನೀವು ಸ್ಥಳದಲ್ಲಿ ಹಾಜರಿದ್ದು, ಗಣಪತಿ ಹಾದು ಹೋಗುವಾಗ ಎಚ್ಚರವಹಿಸಬೇಕಾಗಿದ್ದು, ಎಚ್ಚರವಹಿಸದೇ ಕರ್ತವ್ಯಲೋಪ ಎಸಗಿದ ಹಿನ್ನೆಲೆಯಲ್ಲಿ ಆ ದಿನ ಮಸೀದಿ ಮುಂಭಾಗದಲ್ಲಿ ಮೇಲ್ಕಂಡ ಗಣಪತಿ ವಿಸರ್ಜನಾ ಮೆರವಣಿಗೆಯ ಸಂದರ್ಭದಲ್ಲಿ ಕರ್ಪೂರ ಹಚ್ಚುವ ವಿಚಾರದಲ್ಲಿ ಗಲಾಟೆಗಳಾಗಿದ್ದಲ್ಲದೆ ಕೋಮು ಗಲಭೆ ಉಂಟಾಗಿದ್ದು, ಈ ರೀತಿ ನೀವು ಸರಿಯಾದ ರೀತಿಯಲ್ಲಿ ಕ್ರಮ ಕೈಗೊಳ್ಳದೇ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿ, ಉದಾಸೀನತೆ ಪ್ರದರ್ಶಿಸಿದ ಬಗ್ಗೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿಯವರು ಮೇಲೆ(೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರಿಗೆ ಆದೇಶ ಜಾರಿಯಾದ ದಿನಾಂಕದಿಂದ ೪ ವಾರಗಳ ಅಮಾನತ್ತು ಶಿಕ್ಷೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ(೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದ್ದು ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

೧. ತಾನೊಬ್ಬನೇ ಅಲ್ಲದೆ ಇನ್ನೂ ಅನೇಕ ಹಿರಿಯ ಮತ್ತು ಕಿರಿಯ ಅಧಿಕಾರಿಗಳು ಸ್ಥಳದಲ್ಲಿದ್ದರೂ ಗಲಭೆ ನಿಯಂತ್ರಿಸಲಾಗಿಲ್ಲ. ತಾನೊಬ್ಬನೇ ಜವಾಬ್ದಾರನಲ್ಲ.

೨. ಪಿ.ಎಸ್.ಐ.(ಕಾನೂನು ಮತ್ತು ಸುವ್ಯವಸ್ಥೆ)ರವರ ಆದೇಶದಂತೆ ತಾನು ನಡೆದುಕೊಂಡಿದ್ದು, ಎಲ್ಲಾ ಆಗು ಹೋಗುಗಳಿಗೂ ಅವರೇ ಜವಾಬ್ದಾರಿಯಾಗಿರುತ್ತಾರೆ.

೩. ಸಿಪಿಐ ರವರು ಶಾಂತಿ ಸಭೆಯ ಉಸ್ತುವಾರಿ ಹೊತ್ತಿದ್ದು ಗಲಭೆಗೂ ಅವರೇ ಜವಾಬ್ದಾರಿಯಾಗಿರುತ್ತಾರೆ.

೪. ಸದರಿ ಪ್ರದೇಶವು ಸೂಕ್ಷ್ಮವಾಗಿದ್ದು, ಹೆಚ್ಚಿನ ಸಿಬ್ಬಂದಿಯನ್ನು ಮೇಲಾಧಿಕಾರಿಗಳು ನೇಮಕ ಮಾಡಬೇಕಾಗಿತ್ತು.

ಅರ್ಜಿದಾರರ ವಾದಾಂಶಗಳನ್ನು ಪರಿಶೀಲಿಸಿದಲ್ಲಿ ಅವರು ತಮ್ಮ ಮೇಲಿನ ಆರೋಪಗಳನ್ನು ಇ ತರರ ಮೇಲೆ ಹೊರಿಸುವ ಸ್ವಭಾವದವರಾಗಿ ಕಂಡುಬರುತ್ತಾರೆ.

ಘಟನೆ ನಡೆಯದಂತೆ ತಡೆಯಬೇಕಾದ್ದು ಪೊಲೀಸ್ ಅಧಿಕಾರಿಯ ಕರ್ತವ್ಯ. ಇ ದಕ್ಕೆ ಸಬೂಬು ಹೇಳುವುದು ಸರಿಯಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ ೫೯ ಪೊಸಿಅ ೨೦೦೪, ಬೆಂಗಳೂರು, ದಿನಾಂಕ: ೧೩ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ನಾಗಪ್ಪ, ಪಿಎಸ್‌ಐ, ಸಂಚಾರಿ ಅರಣ್ಯ ದಳ, ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 469

**ವಿಷಯ:** ಶ್ರೀ ಬಿ.ಎಸ್.ಕೊಳ್ಳಿ, ಸಿಪಿಸಿ ೧೪೩೬, ಬೆಳಗಾವಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
೧) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಳಗಾವಿ ಜಿಲ್ಲೆರವರ ಆದೇಶ ಸಂಖ್ಯೆ:ಪಿಯುಎಸ್/೫/೯೨ ಅಪು ಸಂಖ್ಯೆ:೧೦೪೬/೧೯೫ ದಿನಾಂಕ: ೯-೧೨-೯೫.
೨) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾಂ ರವರ ಆದೇಶ ಸಂಖ್ಯೆ:ಅಪೀಲು/ಉವ/೬/೦೨ ದಿನಾಂಕ:೩-೫-೨೦೦೨.
೩) ಅರ್ಜಿದಾರರ ಮನವಿ ದಿನಾಂಕ:೧೫-೨-೨೦೦೩.
೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨)೩/೨೦೦೩-೦೪ ದಿನಾಂಕ:೨೭-೮-೨೦೦೩.

**ಪ್ರಸ್ತಾವನೆ:**

ಶ್ರೀ ಬಿ.ಎಸ್.ಕೊಳ್ಳಿ, ಸಿಪಿಸಿ ೧೪೩೬, ಬೆಳಗಾಂ ಜಿಲ್ಲೆ ರವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದಿನಾಂಕ:೭-೬-೯೧ ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದ ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೬ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

ಇ ಲಾಖಾ ವಿಚಾರಣೆಯಲ್ಲಿ ಅರ್ಜಿದಾರರು ಸಹಕರಿಸದೇ ಇ ದ್ದುದರಿಂದ ಹಾಗೂ ಸಮಜಾಯಿಷಿ ನೀಡದೇ ಇ ದ್ದುದರಿಂದ ಶಿಸ್ತು ಪ್ರಾಧಿಕಾರಿ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ತೆಗೆದುಹಾಕಿರುತ್ತಾರೆ.

ಮೇಲ್ಕಂಡ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸೇಡಿನ ಮನೋಭಾವದಿಂದ ತನ್ನ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲಾಗಿದೆ. ತನ್ನನ್ನು ಸೇವೆಯಿಂದ ತೆಗೆದುಹಾಕಿರುವುದರಿಂದ ತನ್ನ ಕುಟುಂಬ ಬೀದಿಪಾಲಾಗಿದೆ ಎಂದು ಮಾತ್ರ ವಾದಿಸಿರುತ್ತಾರೆ. ಆದರೆ ಗೈರು ಹಾಜರಿ ಪ್ರವೃತ್ತಿಯನ್ನು ಬೆಳೆಸಿಕೊಂಡಿರುವವರಾಗಿ ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಸರ್ಕಾರವು ಇ ವರ ಯಾವುದೇ ವಾದಾಂಶವನ್ನು ಒಪ್ಪದೇ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೩೮ ಪೊಸಿಅ ೨೦೦೩, ಬೆಂಗಳೂರು, ದಿನಾಂಕ: ೧೭ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿಯನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎಸ್.ಕೊಳ್ಳಿ, ಮಾಜಿ ಸಿಪಿಸಿ ೧೪೩೬, ಬೆಳಗಾಂ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 470

**ವಿಷಯ:** ಶ್ರೀ ಎಂ.ಟಿಪ್ಪುಸುಲ್ತಾನ್, ಮಾಜಿ ಪಿಸಿ ೩೦೫, ದಾವಣಗೆರೆ ಜಿಲ್ಲೆ ರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:** ೧) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ದಾವಣಗೆರೆ ರವರ ಆದೇಶ ಸಂಖ್ಯೆ:ಸಿಬ್ಬಂದಿ(೫)/ಇ .ವಿ./೧೫/ ೨೦೦೧-೦೨ ದಿನಾಂಕ:೨೨-೮-೨೦೦೧.

೨) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ರವರ ಆದೇಶ ಸಂಖ್ಯೆ:ಅಪೀಲು/೩೪/೨೦೦೧-೦೨ ಓಬಿ. ನಂ.೧೭/೨೦೦೩-೦೪ ದಿನಾಂಕ:೨೩-೪-೨೦೦೧.

೩) ಅರ್ಜಿದಾರರ ಮನವಿ ದಿನಾಂಕ:೨೭-೬-೨೦೦೩.

೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨)/೪೮/೨೦೦೩-೦೪ ದಿನಾಂಕ:೯-೧೨-೨೦೦೩.

**ಪ್ರಸ್ತಾವನೆ:**

ಶ್ರೀ ಎಂ.ಟಿಪ್ಪುಸುಲ್ತಾನ್, ಮಾಜಿ ಸಿಪಿಸಿ ೩೦೫, ದಾವಣಗೆರೆ ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೬ ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣ:**

"ಆ.ಪೋ.ಅ ರವರಾದ ನೀವು ಈ ಮುಂಚೆ ದಾವಣಗೆರೆ ಕೆ.ಟಿ.ಜೆ. ನಗರ ಠಾಣೆಯಲ್ಲಿ ಕೆಲಸ ಮಾಡುತ್ತಿದ್ದಾಗ ದಿನಾಂಕ: ೧೧-೧೨-೨೦೦೦ ರಂದು ಮಧ್ಯಾಹ್ನ ೧೨ ಗಂಟೆ ಸಮಯಕ್ಕೆ ಕೆ.ಟಿ.ಜೆ.ನಗರ ಠಾಣೆಯ ಮಹಿಳಾ ಹೆಚ್‌ಸಿ ೨೦೮, ಶ್ರೀಮತಿ ಪುಷ್ಪಲತಾ ರವರು ತಮ್ಮ ಮನೆಯಲ್ಲಿ ಇಲ್ಲದೇ ಇದ್ದ ಸಮಯದಲ್ಲಿ ನೀವು ಅವರ ಮನೆಗೆ ಹೋಗಿ ಅವರ ತಂಗಿ ಕುಮಾರಿ ವನಜಾಕ್ಷಿ ಎಂಬುವರೊಂದಿಗೆ ಅಸಭ್ಯ ರೀತಿಯಲ್ಲಿ ವರ್ತಿಸಿ ಅವರ ಮಾನಭಂಗ ಮಾಡಲು ಪ್ರಯತ್ನಿಸಿ ಇಲಾಖೆಗೆ ಕಳಂಕ ತರುವಂತಹ ದುರ್ವರ್ತನೆ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದೇ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಲಾಗಿದೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿ ಪ್ರಾಧಿಕಾರಿ ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣಾ ಮೇಲ್ಮನವಿದಾರರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

೧) ಸಾಕ್ಷಿಗಳ ಹೇಳಿಕೆಯಲ್ಲಿ ವ್ಯತ್ಯಾಸ ಕಂಡುಬಂದಿದ್ದು, ಘಟನೆಯ ಬಗ್ಗೆ ಠಾಣಾ ದಿನಚರಿಯಲ್ಲಿ ನಮೂದಿಸಿದ ವೇಳೆಗೂ ಸಾಕ್ಷಿಗಳ ಹೇಳಿಕೆಯಲ್ಲಿ ಕಂಡುಬಂದ ವೇಳೆಗೂ ವ್ಯತ್ಯಾಸ ಕಂಡುಬಂದಿದ್ದು ಸಂಶಯಾತ್ಮಕವಾಗಿದೆ.

೨) ಇಲಾಖಾ ವಿಚಾರಣೆಯಲ್ಲಿನ ಎಲ್ಲಾ ೪ ಸಾಕ್ಷಿಗಳು ಆಸಕ್ತ ಸಾಕ್ಷಿಗಳಾಗಿದ್ದು ಮೇಲಾಧಿಕಾರಿಗಳು ಹೇಳಿದಂತೆ ನುಡಿದಿರುತ್ತಾರೆ.

೩) ಅರ್ಜಿದಾರರಿಗೂ ಅ.ಸಾ.೩ ಪಿಎಸ್‌ಐ ರವರಿಗೂ ವೈಮನಸ್ಸು ಇದ್ದುದರಿಂದ ಈ ಘಟನೆಯನ್ನು ಸೃಷ್ಟಿಸಿರುತ್ತಾರೆ.

೪) ಸ್ವತಂತ್ರ ಸಾಕ್ಷಿಗಳು ಯಾವುದು ಇರುವುದಿಲ್ಲ.

೫) ಅ.ಸಾ.೨ ಉದ್ದೇಶಪೂರ್ವಕವಾಗಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿರುವುದಿಲ್ಲ.

೬) ಅ.ಸಾ.೧ ಕುಮಾರಿ ವನಜಾಕ್ಷಿರವರು ಸುಳ್ಳು ಹೇಳಿಕೆಯನ್ನೇ ನೀಡಿದ್ದು ನಂಬಲರ್ಹವಲ್ಲ.

೭) ಅರ್ಜಿದಾರರನ್ನು ಇತರ ಸಿಬ್ಬಂದಿಯ ಜೊತೆ ಕ್ರೀಡಾಕೂಟಕ್ಕೆ ನೇಮಕ ಮಾಡಿದ್ದು ಅದನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ.

ನ್ಯಾಯಾಲಯ ಪ್ರಕ್ರಿಯೆ ಮತ್ತು ಇಲಾಖಾ ವಿಚಾರಣಾ ಪ್ರಕ್ರಿಯೆಗಳು ಬೇರೆ ಬೇರೆ ಆಗಿದ್ದು, ಅರ್ಜಿದಾರರು ಪ್ರಕರಣದ ಬಗ್ಗೆ ಫಿರ್ಯಾದುದಾರರು ಸಂಬಂಧಿತ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಿಲ್ಲ. ಅದು ತನಗೆ ಅನುಕೂಲಕರ ಎನ್ನುವ ರೀತಿಯಲ್ಲಿ ವಾದ ಮಂಡಿಸಿರುತ್ತಾರೆ. ಆದರೆ ದೂರನ್ನು ಕಡ್ಡಾಯವಾಗಿ ಸಲ್ಲಿಸಲೇಬೇಕೆಂಬ ಯಾವುದೇ ನಿಯಮ ಅಥವಾ ಆದೇಶವಿರುವುದಿಲ್ಲ. ಇಂತಹ ಪ್ರಕರಣಗಳಲ್ಲಿ ಸ್ಥಳದಲ್ಲಿ ಲಭ್ಯವಾಗುವ ಸಾಕ್ಷಿ ಮತ್ತು ಪುರಾವೆಗಳನ್ನು ಮಾತ್ರ (circumstancial evidences) ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಇನ್ನು ಹೆಚ್ಚಿನ ದಾಖಲೆ ಮತ್ತು ಸಾಕ್ಷಿಗಳ ಅಗತ್ಯವಿರುವುದಿಲ್ಲ. ಅರ್ಜಿದಾರರು ಸದರಿ ಸಮಯದಲ್ಲಿ ಕ್ರೀಡಾಕೂಟದಲ್ಲಿ ಭಾಗವಹಿಸಿದ್ದರೆಂದು ಹೇಳಿಕೊಂಡಿದ್ದರೂ ಸಹ ಆ ಕ್ರೀಡಾಕೂಟವು ಸದರಿ ಘಟನೆ ನಡೆದಿರುವ ವಸತಿ ಸಮುಚ್ಛಯದ ಕಾಂಪೌಂಡಿನ ಪರಿಮಿತಿಯ ಸ್ಥಳದಲ್ಲಿಯೇ ಇದ್ದುದರಿಂದ ಘಟನೆ ನಡೆದಿರುವ ಬಗ್ಗೆ ಅಲ್ಲಗಳೆಯಲು ಸಾಧ್ಯವಿಲ್ಲ.

ಪೊಲೀಸ್ ಇಲಾಖೆ ಒಂದು ಶಿಸ್ತಿನ ಇಲಾಖೆ. ಸಾರ್ವಜನಿಕರ ಜೀವ ಹಾಗೂ ಆಸ್ತಿಪಾಸ್ತಿಯನ್ನು ಕಾಪಾಡುವುದು, ಮಹಿಳೆಯರ ಹಾಗೂ ಸಮಾಜದಲ್ಲಿನ ಇತರ ದುರ್ಬಲ ವರ್ಗದವರ ಸಂರಕ್ಷಣೆ ಮಾಡುವುದು, ಇವು ಪೊಲೀಸ್ ಇಲಾಖೆಯ ಮುಖ್ಯ ಕರ್ತವ್ಯವಾಗಿರುತ್ತವೆ. ಆದರೆ ಈ ಪ್ರಕರಣದಲ್ಲಿ ಶ್ರೀ ಎಂ.ಟಿಪ್ಪುಸುಲ್ತಾನ್, ಮಾಜಿ ಎಪಿಸಿ ಒಬ್ಬ ಮಹಿಳೆಯ ಮಾನಭಂಗಕ್ಕೆ ಯತ್ನಿಸಿ

ದುರ್ನಡತೆ ಎಸಗಿರುತ್ತಾರೆ. ಇ ದು ಖಂಡನೀಯ. ಅರ್ಜಿದಾರರು ಎಸಗಿರುವ ಇ ಂತಹ ಗುರುತರವಾದ ಆಪಾದನೆ ಮತ್ತು ದುರ್ವರ್ತನೆಗೆ ಶಿಸ್ತು ಪ್ರಾಧಿಕಾರಿಗಳು ಇ ವರನ್ನು ಸೇವೆಯಿಂದ ವಜಾಗೊಳಿಸಿದ್ದು ಸದರಿ ಶಿಕ್ಷೆ ಸಮರ್ಪಕವಾಗಿದೆ. ಮತ್ತು ಇ ದರಲ್ಲಿ ಸರ್ಕಾರವು ಹಸ್ತಕ್ಷೇಪ ಮಾಡುವ ಅವಶ್ಯಕತೆ ಕಂಡುಬರುವುದಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೭ ಪೊಸಿಅ ೨೦೦೪, ಬೆಂಗಳೂರು, ದಿನಾಂಕ: ೬ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿಯನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಟಿಪ್ಪುಸುಲ್ತಾನ್, ಮಾಜಿ ಪಿಸಿ ೩೦೫, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 471

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಗಂಗಾಧರಯ್ಯ, ಹೆಚ್.ಸಿ.೧೪೦೧ ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** ೧) ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್(ದಕ್ಷಿಣ), ಬೆಂಗಳೂರು ರವರ ಆದೇಶ ಸಂಖ್ಯೆ:ಡಿಇ /ಆರ್/ ೬/೧೩೦/೯೬-೯೭ ದಿನಾಂಕ:೧೬-೧-೯೯

೨) ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಂಚಾರ, ಬೆಂಗಳೂರು ರವರ ಆದೇಶ ಸಂಖ್ಯೆ:೧೭/ಅಪೀಲು/೯೯-೨೦೦೦ ಓಬಿ ಸಂ.೧೩೩/೨೦೦೦ ದಿನಾಂಕ:೨೬-೫-೨೦೦೦.

೩) ಅರ್ಜಿದಾರರ ಮನವಿ ದಿನಾಂಕ:೧೦-೧-೨೦೦೧.

೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೩)೪೫/೨೦೦೦-೦೧ ದಿನಾಂಕ:೮-೧೧-೨೦೦೧.

**ಪ್ರಸ್ತಾವನೆ:**

ಶ್ರೀ ಗಂಗಾಧರಯ್ಯ, ಹೆಚ್.ಸಿ.೧೪೦೧, ಬೆಂಗಳೂರು ರವರ ವಿರುದ್ಧ(ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ ೧೯೬೫ರ ನಿಯಮ ೬ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣ:**

ದಿನಾಂಕ:೯-೧೧-೯೫ರಂದು ಬೆಳಿಗ್ಗೆ ೮.೩೦ ಗಂಟೆ ಸಮಯದಲ್ಲಿ ಅಂಬೇಡ್ಕರ್ ನಗರದ ವಾಸಿ ಶ್ರೀಮತಿ ಮಹಾಲಕ್ಷ್ಮಿ ಎಂಬುವರು ರಕ್ತ ಸುರಿಸಿಕೊಂಡು ಠಾಣೆಗೆ ಬಂದಾಗ ದಿನಾಂಕ:೮-೧೧-೯೫ರಂದು ರಾತ್ರಿ ೮ ಗಂಟೆಯಿಂದ ಮರುದಿನ ಅಂದರೆ ದಿನಾಂಕ: ೯-೧೧-೯೫ರಂದು ಬೆಳಿಗ್ಗೆ ೬ ಗಂಟೆಯವರೆಗೆ ಎಸ್.ಹೆಚ್.ಓ. ಪ್ರಭಾರ ಕರ್ತವ್ಯದಲ್ಲಿದ್ದ ಹೆಚ್.ಸಿ.೧೬೪೨ ರವರು ಆಕೆಗೆ ಚಿಕಿತ್ಸೆಗೆ ಮೆಮೋ ಬರೆದಾಗ ನೀವು ಬಂದು ರಿಲೀವ್ ಮಾಡಿದಿರಿ. ಆಗ ಅವರು ನಿಮಗೆ ವಿಷಯವನ್ನು ತಿಳಿಸಿ ಗಾಯಾಳುವನ್ನು ಪಿಸಿ ೩೮೦೨ ರವರ ಜೊತೆಗೆ ಆಸ್ಪತ್ರೆಗೆ ಕಳುಹಿಸಿ ಆಕೆ ಆಸ್ಪತ್ರೆಯಿಂದ ಬಂದ ನಂತರ ಹೇಳಿಕೆ ಪಡೆದುಕೊಂಡು ಕೇಸು ದಾಖಲು ಮಾಡಿ ತಿಳಿಸಿ ಹೋದರು. ಆನಂತರ ಆಕೆ ಚಿಕಿತ್ಸೆ ಪಡೆದು ಬಂದ ನಂತರ ಆಕೆಯ ಹೇಳಿಕೆಯನ್ನು ಠಾಣಾಧಿಕಾರಿಯಾಗಿದ್ದ ನೀವು ಪಡೆದು ಸಿಮಿಸ್ ನಂ.೪೯೫/೯೫ರಲ್ಲಿ ನಮೂದಿಸಿ ಪಿರ್ಯಾದಿಗೆ ಅರ್ಜಿ ಸ್ವೀಕರಿಸಿದ ಬಗ್ಗೆ ದಾಖಲಾತಿಗಳನ್ನು ಕೊಟ್ಟಿರುವುದಿಲ್ಲ. ಮತ್ತು ಸ್ಥಳಕ್ಕೆ ಭೇಟಿ ನೀಡಿ ವಿಚಾರಣೆ ನಡೆಸಿರುವುದಿಲ್ಲ. ಶ್ರೀಮತಿ ಮಹಾಲಕ್ಷ್ಮಿ ರವರು ನೀಡಿರುವ ಹೇಳಿಕೆಯ ಪ್ರಕಾರ ಶ್ರೀಮತಿ ರಾಣಿರವರು ಕಲಂ ೩೨೪ ಐಪಿಸಿ ಪ್ರಕಾರ ಅಪರಾಧ ಎಸಗಿರುವುದು ಕಂಡು ಬಂದರೂ ಸಹ ನೀವು ಆಕೆಯ ವಿರುದ್ಧ ಕೇಸು ದಾಖಲು ಮಾಡದೇ ಕರ್ತವ್ಯದಲ್ಲಿ ಲೋಪ ಎಸಗಿರುವಿರಿ. ಹಾಗೂ ನೀವು ಕರ್ತವ್ಯ ಮುಗಿಸಿ ಅಧಿಕಾರಿಗಳಿಗೆ ವರದಿ ನೀಡದೇ ಹಾಗೆಯೇ ಹೊರಟು ಹೋಗಿರುವಿರಿ. ಹೆಚ್.ಸಿ.೧೨೭೦ರವರು ಅದೇ ದಿನ ೨.೩೫ ಗಂಟೆಗೆ ಪುನ: ಗಾಯಾಳು ಶ್ರೀಮತಿ ಲಕ್ಷ್ಮೀ ರವರ ಹೇಳಿಕೆ ಪಡೆದು ಮೊ.ನಂ.೩೫೬/೯೬ರ ಕಲಂ ೩೨೪ ಐಪಿಸಿ ಪ್ರಕಾರ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ನಿವೇದಿಸಿರುವರು.

೨. ದಿನಾಂಕ:೨೨-೧-೯೬ರಂದು ನಿಮಗೆ ರಾತ್ರಿ ೮ ಗಂಟೆಯಿಂದ ಬೆಳಿಗ್ಗೆ ೮ ಗಂಟೆಯವರೆಗೆ ಎಸ್.ಆರ್.ಕರ್ತವ್ಯಕ್ಕೆ ನೇಮಕವಾಗಿದ್ದು, ಪಿ.ಎಸ್.ಐ. ಅಪರಾಧ ರವರು ರಾತ್ರಿ ೧೦.೦೦ ಗಂಟೆಯಲ್ಲಿ ಚೆಕ್ ಮಾಡಿದಾಗ ನೀವು ಪಾನಮತ್ತರಾಗಿ ಠಾಣೆಯಲ್ಲಿ ಅಧಿಕಾರಿಗಳಿಗೆ ಅವಾಚ್ಯ ಶಬ್ದಗಳಿಂದ ಬೈಯ್ದಿರುವುದರ ಬಗ್ಗೆ ಆಸ್ಪತ್ರೆಗೆ ಕಳುಹಿಸಿ ಪ್ರಮಾಣ ಪತ್ರ ಮಾಡಿಸಿರುತ್ತಾರೆ.

೩. ನೀವು ದಿನಾಂಕ:೨೨-೧-೯೬ರಂದು ಕರ್ತವ್ಯಕ್ಕೆ ಗೈರುಹಾಜರಾಗಿರುವಿರಿ.

೪. ದಿನಾಂಕ:೨೩-೧-೯೬ರಂದು ಸಂಜೆ ೬ ಗಂಟೆಯಲ್ಲಿ ನೀವು ಸುದ್ದುಗುಂಟೆ ಪಾಳ್ಯ ರಸ್ತೆಯಲ್ಲಿ ಕುಡಿದು ಪ್ರಜ್ಞಾಹೀನರಾಗಿ ಬಿದ್ದಿರುವಿರಿ. ನಿಮ್ಮನ್ನು ತಿಲಕ್‌ನಗರ ಪೊಲೀಸ್ ಠಾಣೆಯವರು ಜಯನಗರ ಸಾರ್ವಜನಿಕ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಪರೀಕ್ಷೆ ನಂ.೧೫/೯೬ರಲ್ಲಿ ಮಾಡಿಸಿರುತ್ತಾರೆ.

೫. ನೀವು ಯಾವಾಗಲೂ ಪಾನಮತ್ತರಾಗಿ ಕರ್ತವ್ಯ ಲೋಪ ನಿರ್ಲಕ್ಷತೆ ತೋರುವ ಚಾಳಿಯವರಾಗಿರುವಿರಿ. ಜವಾಬ್ದಾರಿಯುತ ಹುದ್ದೆಯಲ್ಲಿದ್ದು ಬೇ ವಾರಂಟ್ ತಕ್ಸೀರು ವರದಿಯಾದರೂ ಸಹ ಕೇಸು ದಾಖಲು ಮಾಡದೇ ಸೀಮಿಸ್ ಆಗಿ ಪರಿಗಣಿಸಿ ಮೇಲಾಧಿಕಾರಿಗಳ ಗಮನಕ್ಕೆ ತರದೇ ಕರ್ತವ್ಯ ಲೋಪ ಎಸಗಿರುವುದು ಸ್ಪಷ್ಟವಾಗಿ ಕಂಡು ಬಂದಿದೆ.

ಮೇಲ್ಕಂಡ ಆರೋಪದ ಬಗ್ಗೆ ನಡೆದ ಇ ಲಾಖಾ ವಿಚಾರಣೆಯಲ್ಲಿ ಅರ್ಜಿದಾರರ ವಿರುದ್ಧ ಒಂದನೇ ಆರೋಪ ಮಾತ್ರ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ

ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ೬ ತಿಂಗಳ ಕಾಲ ಸಂಚಿತ ಪರಿಣಾಮವಾಗಿ ಮುಂದೂಡಿ ಅಮಾನತ್ತಿನ ಅವಧಿಯನ್ನು ಅರ್ಹ ರಜೆ ಎಂದು ಪರಿಗಣಿಸಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಿದ್ದು, ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

೧) ತಾನು ಸಲ್ಲಿಸಿರುವ ಸಮಜಾಯಿಷಿಯನ್ನು ಏಕೆ ಒಪ್ಪುತ್ತಿಲ್ಲವೆಂದು ಶಿಸ್ತು ಪ್ರಾಧಿಕಾರಿ ಚರ್ಚಿಸಿಲ್ಲ.

೨) ತಾನು ಘಟನೆ ನಡೆದ ಸಮಯದಲ್ಲಿ ಠಾಣಾಧಿಕಾರಿಯಾಗಿಲ್ಲ. ಠಾಣಾ ದಿನಚರಿ ಪರಿಶೀಲಿಸಿದರೆ ಇ ದು ತಿಳಿಯುತ್ತದೆ.

೩) ದಿನಾಂಕ:೯-೧೧-೯೫ರಂದು ೧೪.೩೫ ಗಂಟೆಗೆ ಶ್ರೀಮತಿ ಮಹಾಲಕ್ಷ್ಮಿ ರವರು ಠಾಣೆಗೇ ಬಂದಿರುವುದಿಲ್ಲ. ಆಕೆ ಠಾಣೆಗೆ ಬಂದಾಗ ತಾನು ಠಾಣಾಧಿಕಾರಿಯಾಗಿರುವುದಿಲ್ಲ.

೪) ಕೆ.ಸಿ.ಎಸ್.ಆರ್. ನಿಯಮ ೧೦೦(೬)(೭)ರ ಪ್ರಕಾರ ತಾನು ತನ್ನ ಅಮಾನತ್ತಿನ ಅವಧಿಯನ್ನು ಅರ್ಹ ರಜೆ ಎಂದು ಬದಲಾಯಿಸಲು ಕೇಳಿಲ್ಲ. ಸದರಿ ನೌಕರನು ಅಮಾನತ್ತನ್ನು ರಜೆ ಎಂದು ಪರಿಗಣಿಸಲು ಕೇಳಿದಾಗ ಮಾತ್ರ ಈ ಅವಧಿಯನ್ನು ಅರ್ಹ ರಜೆ ಎಂದು ಪರಿಗಣಿಸಲು ಬರುತ್ತದೆ. ತನ್ನ ಸಮಜಾಯಿಷಿ ಪಡೆಯದೇ ಅಮಾನತ್ತಿನ ಅವಧಿಯನ್ನು ಅರ್ಹ ರಜೆ ಎಂದು ಮಾಡಿರುವುದು ಕಾನೂನು ಬಾಹಿರ.

ಅರ್ಜಿದಾರರ ವಾದಾಂಶಗಳನ್ನು ಪರಿಶೀಲಿಸಲಾಗಿದೆ. ಕೆ.ಸಿ.ಎಸ್.ಆರ್. ನಿಯಮಗಳನ್ವಯ ಇ ಲಾಖಾ ವಿಚಾರಣೆಯಲ್ಲಿ ಆರೋಪಿತ ನೌಕರರನ್ನು ಸಂಪೂರ್ಣವಾಗಿ ಆಪಾದನೆಗಳಿಂದ ಮುಕ್ತಗೊಳಿಸಿದಲ್ಲಿ ಮಾತ್ರ ಅಮಾನತ್ತಿನ ಅವಧಿಯನ್ನು ಕರ್ತವ್ಯ ಎಂದು ಪರಿಗಣಿಸಲು ಅವಕಾಶವಿದೆ. ಇ ಲ್ಲದಿದ್ದಲ್ಲಿ ಸದರಿ ಅವಧಿಯನ್ನು ಕರ್ತವ್ಯದ ಮೇಲಿಲ್ಲದ ಅವಧಿ ಎಂದು ಪರಿಗಣಿಸಬೇಕಾಗಿದೆ. ಒಂದು ವೇಳೆ ನೌಕರರು ಇ ಚ್ಛಿಸಿದಲ್ಲಿ ಅದನ್ನು ರಜೆ ಎಂದು ಪರಿಗಣಿಸಲು ಅವಕಾಶವಿದೆ. ಶಿಸ್ತು ಪ್ರಾಧಿಕಾರಿಗಳು ಈಗಾಗಲೇ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಅಮಾನತ್ತಿನ ಅವಧಿಯನ್ನು ಅರ್ಹ ರಜೆ ಎಂದು ಈಗಾಗಲೇ ಪರಿಗಣಿಸಿದ್ದು ಮೇಲ್ಮನವಿ ಪ್ರಾಧಿಕಾರಿ ಇ ದನ್ನು ಸ್ಥಿರೀಕರಿಸಿರುತ್ತಾರೆ ಅಲ್ಲದೆ ಅರ್ಜಿದಾರರಿಗೆ ಅವರು ಎಸಗಿರುವ ತಪ್ಪಿಗೆ ದಂಡನೆ ವಿಧಿಸಿರುವುದರಿಂದ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಲು ಸಾಧ್ಯವಿಲ್ಲ.

ಅರ್ಜಿದಾರರ ಮೇಲಿನ ಆಪಾದನೆ ನಿಸ್ಸಂದೇಹವಾಗಿ ಸಾಬೀತಾಗಿದ್ದು, ಅರ್ಜಿದಾರರಿಗೆ ವಿಧಿಸಿರುವ ದಂಡನೆ ಅವರ ಆಪಾದನೆಗೆ ತಕ್ಕ ದಂಡನೆಯಾಗಿರುತ್ತದೆ. ಇ ದರಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇ ಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ ೨೪ ಪೊಸಿಅ ೨೦೦೧, ಬೆಂಗಳೂರು, ದಿನಾಂಕ: ೨೧ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿಯನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗಂಗಾಧರಯ್ಯ, ಹೆಚ್.ಸಿ. ೧೪೦೧, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 472

**ವಿಷಯ:** ಶ್ರೀ ಎಸ್.ಎನ್. ಅಂಬರೀಷ್, ಸಿಪಿಸಿ ೪೬೪, ಮಂಡ್ಯ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** ೧) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಮಂಡ್ಯ ಜಿಲ್ಲೆ ರವರ ಆದೇಶ ಸಂಖ್ಯೆ:ಸಿಬ್ಬಂದಿ-೨/ಪಿಆರ್/೨೦೦೦-೦೧ ಓಬಿ ಸಂಖ್ಯೆ:೨೭೩/೨೦೦೦-೦೧ ದಿನಾಂಕ:೧೭-೧೦-೨೦೦೦.

೨) ಇ ನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ರವರ ಆದೇಶ ಸಂಖ್ಯೆ:ಅಪೀಲು/೧೨೪/೨೦೦೦-೦೧ ದಿನಾಂಕ: ೧೪-೯-೨೦೦೧.

೩) ಅರ್ಜಿದಾರರ ಮನವಿ ದಿನಾಂಕ:..

೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು(೨)೩೭/೨೦೦೨-೦೩ ದಿನಾಂಕ:೨೨-೧೧-೨೦೦೨.

**ಪ್ರಸ್ತಾವನೆ:-**

ಶ್ರೀ ಎಸ್.ಎನ್.ಅಂಬರೀಷ್, ಸಿಪಿಸಿ ೪೬೪, ಮಂಡ್ಯ ಜಿಲ್ಲೆ ರವರ ವಿರುದ್ದ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) "ದಿನಾಂಕ:೧೭-೬-೨೦೦೦ರಲ್ಲಿ ಮಂಡ್ಯ ಪೂರ್ವ ಠಾಣೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆ ಮಾಡಿದ್ದು, ೨೪ ಗಂಟೆಯೊಳಗಾಗಿ ವರದಿ ಮಾಡಿಕೊಳ್ಳಲು ಆದೇಶಿಸಿದ್ದರೂ ದಿನಾಂಕ: ೨೪-೬-೨೦೦೦ರಂದು ಪಾಂಡವಪುರ ಠಾಣೆಯಿಂದ ಬಿಡುಗಡೆ ಹೊಂದಿದ್ದು, ೭-೭-೨೦೦೦ರಂದು ವಿಳಂಬವಾಗಿ ವರದಿ ಮಾಡಿದ್ದುದರ ಆರೋಪದ ಬಗ್ಗೆ" ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೭ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರಿಗೆ "ಛೀಮಾರಿ" ಶಿಕ್ಷೆ ವಿಧಿಸಿದ್ದು, ಗೈರು ಹಾಜರಿ ಅವಧಿಯನ್ನು ವೇತನರಹಿತ ರಜೆಯನ್ನಾಗಿ ಪರಿಗಣಿಸಿ ಸಂಖ್ಯೆ:ಸಿಬ್ಬಂದಿ/೨/ಪಿಆರ್/೨೦೦೦-೦೧ ಓಬಿ ಸಂ.೨೭೩/೨೦೦೦-೦೧ ದಿನಾಂಕ: ೧೭-೧೦-೨೦೦೦ರಲ್ಲಿ ಆದೇಶ ಹೊರಡಿಸಿರುತ್ತಾರೆ.

ಮೇಲ್ಕಂಡ ಆದೇಶದ ವಿರುದ್ದ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶ ಹೊರಡಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ದ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ದಿನಾಂಕ:೨೯-೬-೨೦೦೦ ರಿಂದ ೬-೭-೨೦೦೦ರವರೆಗೆ ತನಗೆ ಖಾಯಿಲೆಯಾಗಿದ್ದು, ಹೊರರೋಗಿಯಾಗಿ ಚಿಕಿತ್ಸೆ ಪಡೆದಿದ್ದು, ಮೆಡಿಕಲ್ ಸರ್ಟಿಫಿಕೇಟ್ ಒದಗಿಸಿದ್ದರೂ ಸಹ ಪರಿಗಣಿಸಿಲ್ಲವೆಂದು ವಾದಿಸಿರುತ್ತಾರೆ. ಈ ಸಂಬಂಧ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ಇವರು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ನೀಡಿರುವ ಈ ಕೆಳಕಂಡ ಅಭಿಪ್ರಾಯವನ್ನು ಸರ್ಕಾರ ಗಮನಿಸಿದೆ.

"ಮೇಲ್ಮನವಿದಾರರು ಸೂಚನೆಯನ್ನು ಪರಿಪಾಲಿಸಿರುವುದಿಲ್ಲ. ಮೇಲ್ಮನವಿದಾರರು ಮುಂಚಿತವಾಗಿ ರಜೆ ಮಂಜೂರಾತಿಯನ್ನು ಅಥವಾ ಎಂ.ಹೆಚ್.ಎಸ್.ಅನ್ನು ಪಡೆದಿರುವುದಿಲ್ಲ.

ಮೇಲ್ಮನವಿದಾರರು ನಿಜವಾಗಿಯೂ ಖಾಯಿಲೆಯಿಂದ ಬಳಲುತ್ತಿದ್ದಲ್ಲಿ ರಜೆ ಮಂಜೂರಾತಿ ಪಡೆಯುವಲ್ಲಿ ಯಾವುದೇ ಅಡ್ಡಿ ಇರಲಿಲ್ಲ. ಕೆ.ಸಿ.ಎಸ್.ಆರ್. ನಿಯಮ-೧೮೭ರ ಪ್ರಕಾರ ಮೇಲ್ಮನವಿದಾರರು ಸಲ್ಲಿಸಿರುವ ವೈದ್ಯಕೀಯ ದೃಢೀಕರಣ ಪತ್ರವು ವರ್ಗಾವಣೆಯ ಆದೇಶದಲ್ಲಿರದ ಸರ್ಕಾರಿ ನೌಕರರಿಗೆ ಮಾತ್ರ ಅನ್ವಯಿಸುತ್ತದೆ. ಶಿಸ್ತು ಪ್ರಾಧಿಕಾರವು ಮೇಲ್ಮನವಿದಾರರಿಗೆ ವಿಧಿಸಿರುವ ಶಿಕ್ಷೆಯು ಕಟುವಾಗಿರುವುದಿಲ್ಲ."

ಅಂತೆಯೇ ಅರ್ಜಿದಾರರು ಎಸಗಿರುವ ತಪ್ಪಿಗೆ ವಿಧಿಸಿರುವ 'ಸೆನ್ಸೂರ್' ಶಿಕ್ಷೆಗೆ ಅನುಗುಣವಾಗಿದೆಯೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ ೧೬೯ ಪೊಸಿಅ ೨೦೦೨, ಬೆಂಗಳೂರು, ದಿನಾಂಕ: ೬ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಡವಳಿ) ನಿಯಮಾವಳಿ, ೧೯೬೫ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

೧) ಶ್ರೀ ಎಸ್.ಎನ್.ಅಂಬರೀಶ್, ಸಿಪಿಸಿ ೪೬೮, ಮಂಡ್ಯ ಇವರಿಗೆ ಶಿಸ್ತು ಪ್ರಾಧಿಕಾರವು ತನ್ನ ಸಂಖ್ಯೆ:ಸಿಬ್ಬಂದಿ-೨/ಪಿಆರ್/೬೩/ ೨೦೦೦-೦೧ ದಿನಾಂಕ:೧೭-೧೦-೨೦೦೦ರ ಆದೇಶದಲ್ಲಿ ವಿಧಿಸಿರುವ 'ಸೆನ್ಸೂರ್' ಶಿಕ್ಷೆಯನ್ನು ಸ್ಥಿರೀಕರಿಸಿದೆ.

೨) ಶ್ರೀಯುತರ ದಿನಾಂಕ:೨೯-೬-೨೦೦೦ ರಿಂದ ೬-೭-೨೦೦೦ರ ವರೆಗಿನ ಗೈರುಹಾಜರಿ ಅವಧಿಯನ್ನು ಎಲ್‌ಡಬ್ಲ್ಯೂಪಿ ಬದಲಾಗಿ ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 473

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಹೆಚ್.ರಾಮಯ್ಯ, ಆರ್‌ಪಿಐ, ೭ನೇ ಪಡೆ, ಕೆಎಸ್‌ಆರ್‌ಪಿ ಮಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಕುರಿತು.

**ಓದಲಾಗಿದೆ:** ೧) ಕಮಾಂಡೆಂಟ್, ೧ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ರವರ ಆದೇಶ ಸಂಖ್ಯೆ:ಡಿಇ /೫೧/೨೦೦೨-೦೩ ಓಬಿ ಸಂಖ್ಯೆ:೧೯೦/೨೦೦೨-೦೩ ದಿನಾಂಕ: ೧೪-೧೧-೨೦೦೨.

೨) ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ರವರ ಆದೇಶ ಸಂಖ್ಯೆ:ಅಪೀಲು/೨೦/೨೦೦೨-೦೩ ದಿನಾಂಕ:೨೮-೫-೨೦೦೩.

೩) ಅರ್ಜಿದಾರರ ಮನವಿ ದಿನಾಂಕ:೧೪-೭-೨೦೦೩.

೪) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಸಿಬಿ೮/೩೩/೨೦೦೩-೦೪ ದಿನಾಂಕ:೨೪-೧೧-೨೦೦೩.

**ಪ್ರಸ್ತಾವನೆ:**

ಶ್ರೀ ಹೆಚ್.ಶ್ರೀರಾಮಯ್ಯ, ಆರ್‌ಪಿಐ, ೭ನೇ ಪಡೆ, ಕೆಎಸ್‌ಆರ್‌ಪಿ, ಮಂಗಳೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ರವರ ವಿರುದ್ಧ ಈ ಕೆಳಕಂಡ ದೋಷಾರೋಪಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೭ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪಣ:**

"ಹೆಚ್.ಶ್ರೀರಾಮಯ್ಯ, ಆರ್‌ಪಿಐ ಆದ ನೀವು ೧ನೇ ಪಡೆಯ ವಾಹನ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ವಾಹನ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೇದೆ ಕ್ಲೀನರ್ ಎಂ.ವಾಸು, ಎಫ್ ದಳ ರವರಿಂದ ಹಣ ಕೊಡುವಂತೆ ಪೀಡಿಸುತ್ತಿರುವರೆಂಬ ಆರೋಪ. ನೀವೊಬ್ಬ ಜವಾಬ್ದಾರಿಯುತ ಆರ್.ಪಿ.ಐ. ಆಗಿದ್ದು, ಶಿಸ್ತಿನ ಪಡೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ಈ ರೀತಿ ಹಣ ನೀಡುವಂತೆ ಪೇದೆಗೆ ಹೆದರಿಸುತ್ತಿರುವ ಆರೋಪ."

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ ೬ ತಿಂಗಳ ಕಾಲ ಮುಂದೂಡಿ ಆದೇಶ ಹೊರಡಿಸಿರುತ್ತಾರೆ.

ಮೇಲ್ಕಂಡ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (೨)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಕ್ಲೀನರ್‌ಗಳು ತಮ್ಮ ಕೈಕೆಳಗೆ ಕೆಲಸ ಮಾಡುತ್ತಿದ್ದರೂ ಆರ್‌ಎಸ್‌ಐ ರವರ ಕೈಕೆಳಗೆ ಇರುತ್ತಾರೆ. ತನಗೆ ನೇರ ಸಂಪರ್ಕವಿರುವುದಿಲ್ಲ. ತಾನು ಅವರನ್ನು ಹಣ ಕೇಳುವ ಪ್ರಶ್ನೆ ಇರುವುದಿಲ್ಲ ಎಂದು ವಾದಿಸಿರುತ್ತಾರೆ.

ಆದರೆ ಅವರ ಮೇಲಿನ ಆರೋಪವನ್ನು ಅಲ್ಲಗಳೆಯುವಂತಹ ಯಾವುದೇ ಸಾಕ್ಷ್ಯಾಧಾರವನ್ನೂ ಮಂಡಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ ೧೪೪ ಪೊಸಿಅ ೨೦೦೩, ಬೆಂಗಳೂರು, ದಿನಾಂಕ: ೧೬ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಶ್ರೀರಾಮಯ್ಯ, ಆರ್‌ಪಿಐ, ೭ನೇ ಪಡೆ, ಕೆಎಸ್‌ಆರ್‌ಪಿ, ಮಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 474

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇ ಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಬೆಂಗಳೂರು ನಗರ ಮೈಕೋ ಲೇಔಟ್ ಪೊಲೀಸ್ ಠಾಣೆಯ ಹೆಚ್‌ಸಿ ೪೩೦, ಚಿಕ್ಕಸಿದ್ದಯ್ಯ.ಎಸ್.(ಹಳೆಯ ಲೋಹಸಂಖ್ಯೆ: ಪಿಸಿ ೨೯೭೪ ಯಲಹಂಕ ಪೊಲೀಸ್ ಠಾಣೆ) ಇ ವರ ಕೆಎಟಿ ಅರ್ಜಿ ಸಂಖ್ಯೆ:೪೬೨೨/೯೮ರ ತೀರ್ಪಿನ ರೀತ್ಯ ಪುನರ್ಪರಿಶೀಲಿಸುವ ಬಗ್ಗೆ.

**ಓದಲಾಗಿದೆ:**
೧) ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರ ಅರ್ಜಿ ಸಂಖ್ಯೆ:ಡಿಇ /ಆರ್೬/೮೭ ದಿನಾಂಕ: ೧೭-೧-೯೦.
೨) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಅರ್ಜಿ ಸಂಖ್ಯೆ:ಅಪೀಲು(೩)/೭೧/೮೯-೯೦ ದಿನಾಂಕ:೩೦-೮-೯೦.
೩) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ ೧೮೩ ಪಿಎಆರ್ ೯೦ ದಿನಾಂಕ:೩೦-೪-೯೧.
೪) ಕೆ.ಎ.ಟಿ. ಅರ್ಜಿ ಸಂಖ್ಯೆ:೮೫೧೭/೯೬ ದಿನಾಂಕ:೭-೧-೯೭.
೫) ಸರ್ಕಾರಿ ಹಿಂಬರಹ ಸಂಖ್ಯೆ:ಒಇ ೨೨೭ ಪೊಸಿಅ ೯೭ ದಿನಾಂಕ:೨೭-೬-೯೮.
೬) ಕೆ.ಎ.ಟಿ. ಆದೇಶ ಸಂಖ್ಯೆ:೪೬೨೨/೯೮ ದಿನಾಂಕ:೨೬-೩-೨೦೦೧.
೭) ಅರ್ಜಿದಾರರ ಮನವಿ ದಿನಾಂಕ:೨೩-೧-೨೦೦೨.
೮) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(೨)೭/೨೦೦೨-೦೩ ದಿನಾಂಕ:೨೫-೭-೨೦೦೨.

**ಪ್ರಸ್ತಾವನೆ:**

ಶ್ರೀ ಚಿಕ್ಕಸಿದ್ದಯ್ಯ, ಹೆಚ್.ಸಿ. ಬೆಂಗಳೂರು ನಗರ ರವರ ವಿರುದ್ಧ(ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೬ ಮತ್ತು ೮ರಡಿ ಜಂಟೀ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಶ್ರೀ ನರಸಿಂಹಮೂರ್ತಿ ಬಿನ್ ನರಸಿಂಹಯ್ಯ ಚಿಕ್ಕರಾಮಪ್ಪನ ಹಳ್ಳಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರನ್ನು ಠಾಣೆಗೆ ಕರೆತಂದು, ಹಿಂಸಿಸಿ ಅವರನ್ನು ಬಿಡುಗಡೆ ಮಾಡಲು ರೂ.೨೦೦೦ ಲಂಚ ಕೇಳಿ ದಿನಾಂಕ: ೨೬-೬-೮೭ರಂದು ಲೋಕಾಯುಕ್ತ ರವರು ಒಡ್ಡಿದ ಜಾಲದಲ್ಲಿ ಸದರಿ ನರಸಿಂಹಮೂರ್ತಿ ಯವರಿಂದ ರೂ.೫೦೦ಗಳ ಲಂಚ ಸ್ವೀಕರಿಸುತ್ತಿರುವಾಗ ಸಿಕ್ಕಿ ಬಿದ್ದ ಆಪಾದನೆಯ ಬಗ್ಗೆ."

೨) ಮೇಲ್ಕಂಡ ಆರೋಪದ ಬಗ್ಗೆ ಇ ಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದೆ ಎಂಬ ವರದಿಯ ಆಧಾರದ ಮೇಲೆ, ಮೇಲೆ (೧)ರಲ್ಲಿ ಓದಲಾದ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಗಳು ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ್ದು, ಇ ದರ ವಿರುದ್ಧದ ಮೇಲ್ಮನವಿ ಮೇಲ್ಕಂಡ (೨)ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕೃತವಾಗಿದೆ.

೩) ಇ ದರ ವಿರುದ್ಧ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಭಾಗಶ: ಪುರಸ್ಕರಿಸಿ, ಅವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ ಅವರ ವೇತನವನ್ನು ೨ ಹಂತಗಳಿಗೆ ಇ ಳಿಸುವಂತೆ ಮೇಲೆ (೩)ರಲ್ಲಿ ಓದಲಾದ ಆದೇಶದಲ್ಲಿ ಹೊರಡಿಸಲಾಗಿದೆ. ಇ ದರ ವಿರುದ್ಧ ಶ್ರೀಯುತರು ಕೆ.ಎ.ಟಿ.ಯಲ್ಲಿ ಸಂಖ್ಯೆ:೮೫೧೭/೯೬ರಲ್ಲಿ ಅರ್ಜಿ ಸಲ್ಲಿಸಿದ್ದರು. ಸದರಿ ಪ್ರಕರಣದಲ್ಲಿ ಕೆ.ಎ.ಟಿ.ಯು ದಿನಾಂಕ: ೭-೧-೯೭ರಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

"No reasons are given for condonation of delay.

Hence we decline to entertain the Application. However it is open for the Applicant to approach the State Government in appropriate Review Petition. The State Government may consider the same appropriately.

Subject to this, the Application is dismissed."

ಈ ಆದೇಶದ ಮೇರೆಗೆ ಅರ್ಜಿದಾರರು ಪುನ: ಸರ್ಕಾರಕ್ಕೆ ಮನವಿ ಸಲ್ಲಿಸಿದ್ದು, ಸದರಿ ಅರ್ಜಿಯನ್ನು ಪುನ: ಪರಿಶೀಲಿಸಿ ಶ್ರೀಯುತರ ಮನವಿಯನ್ನು ಪರಿಗಣಿಸಲು ಸಾಧ್ಯವಿಲ್ಲವೆಂದು ಮೇಲೆ (೫)ರಲ್ಲಿ ಓದಲಾದ ಹಿಂಬರಹವನ್ನು ನೀಡಲಾಗಿದೆ.

೪) ಇ ದರ ವಿರುದ್ಧವೂ ಅರ್ಜಿದಾರರು ಪುನ: ಕೆ.ಎ.ಟಿ.ಗೆ ಅರ್ಜಿ ಸಂಖ್ಯೆ:೪೬೨೨/೯೮ರಲ್ಲಿ ಸಲ್ಲಿಸಿದ್ದು, ನ್ಯಾಯಾಲಯವು ತನ್ನ ದಿನಾಂಕ:೨೮-೩-೨೦೦೧ರ ತೀರ್ಪಿನಲ್ಲಿ ಈ ಕೆಳಗಿನಂತೆ ಗಮನಿಸಿ ಆದೇಶಿಸಿದೆ.

"2. In this application the Applicant has sought to challenge the whole proceedings as if the matter has been reopened. He seeks to contend that in respect of the very offence, there was an acquittal and that, therefore, the enquiry which resulted in the dismissal of the Applicant from service and thereafter the order Annexure-A2 modifying the penalty are liable to be set-aside.

Annexure-A4 would show that the original challenge to the decision Annexure-A2 was rejected by the order Annexure-A2 and that has become final. There is no way by which the Applicant could under the guise of challenging Annexure-A4, the order of the Government refusing to review the case, seek to reopen the entire matter.

Therefore, we do not see any reason to examine any of the contentions sought to be raised on behalf of the Applicant as the Application was not admitted by the order Annexure-A3. If the Government felt that after the order Annexure-A3, there was no case for review. It cannot be said that the Government acted against the law in refusing to review the order Annexure-A2 dated:30-4-1992. Indeed if the government does not exercise its power of review for reasons recorded in Annexure-A4, it cannot be said that the Government has acted arbitrarily in passing the order Annexure-A4. Indeed the order Annexure-A2. In the circumstances of the case, gave substantial relief to the Applicant by reinstating him into service. Therefore, the denial of other relief's cannot, in the circumstance, be suggested as arbitrary.

3. In these circumstances, there is no jurisdictional error calling for interference with the order Annexure-A4 passed by the respondents. It is, however, open to the Government to suo-motu re-examine the case and if it is inclined to grant such relief as is permissible in law to the Applicant, they may do so. Otherwise, there is no merit in the application and the application is dismissed."

೫) ಈ ಆದೇಶದನ್ವಯ ಅರ್ಜಿದಾರರು ಸರ್ಕಾರಕ್ಕೆ ಪುನರ್ಪರಿಶೀಲನಾ ಮನವಿಯನ್ನು ಮತ್ತೆ ಸಲ್ಲಿಸಿರುತ್ತಾರೆ. ಅರ್ಜಿದಾರರು ತಮ್ಮ ಮೇಲಿನ ಕ್ರಿಮಿನಲ್ ಮೊಕದ್ದಮೆಯಲ್ಲಿ ತಾವು ಖುಲಾಸೆಯಾಗಿರುವುದರಿಂದ ತಮ್ಮನ್ನು ಸೇವೆಯಲ್ಲಿ ಪುನರಸ್ಥಾಪಿಸಿದ್ದು, ಇದರನ್ವಯ ತಮಗೆ ಬರಬೇಕಾದ ಎಲ್ಲಾ ಸವಲತ್ತುಗಳನ್ನು ಒದಗಿಸಬೇಕೆಂದು ವಾದ ಮಂಡಿಸಿರುತ್ತಾರೆ.

೬) ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರರು ಎಸಗಿರುವ ದುರ್ನಡತೆಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, ೧೯೬೫ರ ನಿಯಮ ೬ ಮತ್ತು ೮ರಡಿ ಇಲಾಖಾ ವಿಚಾರಣೆ ವರದಿಯನುಸಾರ ಅರ್ಜಿದಾರರ ಮೇಲಿನ ಆರೋಪಗಳು ಸಾಬೀತಾಗಿವೆ ಎಂಬ ತೀರ್ಮಾನಕ್ಕೆ ಬಂದು ಸೇವೆಯಿಂದ ವಜಾಗೊಳಿಸಲಾಗಿತ್ತೇ ವಿನ: ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಿದ ಹಿನ್ನೆಲೆಯಲ್ಲಿ ವಜಾಗೊಳಿಸಲಾಗಿಲ್ಲ. ಆದ್ದರಿಂದ ಇವರನ್ನು ಸೇವೆಯಿಂದ ವಜಾಗೊಳಿಸಲು ತೆಗೆದುಕೊಂಡಿರುವ ಕ್ರಮ ನ್ಯಾಯಾಲಯದಲ್ಲಿ ಈ ಬಗ್ಗೆ ದಾಖಲಿಸಿರುವ ಕ್ರಿಮಿನಲ್ ಮೊಕದ್ದಮೆಯ ನಡವಳಿಗಳಿಗೆ ಹೊರತಾಗಿದೆ ಮತ್ತು ಕ್ರಿಮಿನಲ್ ಮೊಕದ್ದಮೆಯನ್ನು ಗಣನೆಗೆ ತೆಗೆದುಕೊಳ್ಳದೆ ಸ್ವತಂತ್ರವಾಗಿ ತೆಗೆದುಕೊಂಡ ಕ್ರಮವಾಗಿದೆ. ಇವರ ದುರ್ನಡತೆಗೆ ಸಂಬಂಧಿಸಿದಂತೆ, ಇಲಾಖಾ ವಿಚಾರಣೆ ನಡೆಸಿ ಇವರನ್ನು ಸೇವೆಯಿಂದ ವಜಾಗೊಳಿಸಲಾಗಿದ್ದು, ಇವರ ಮೇಲೆ ಅನುಕಂಪ ತೋರಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸಲಾಗಿದೆ ಮತ್ತು ಇವರ ದುರ್ನಡತೆಗೆ ಇವರ ವೇತನವನ್ನು ಎರಡು ಹಂತಗಳಿಗೆ ಇಳಿಸುವ ಅತೀ ಕಡಿಮೆ ಪ್ರಮಾಣದ ಶಿಕ್ಷೆಯನ್ನು ವಿಧಿಸಲಾಗಿದೆ.

೭) ಈ ಹಿನ್ನೆಲೆಯಲ್ಲಿ ಅರ್ಜಿದಾರರ ಮನವಿಯಲ್ಲಿ ಪರಿಗಣಿಸಬಹುದಾದ ಅಂಶಗಳಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ ೬೯ ಪೊಸಿಅ ೨೦೦೨, ಬೆಂಗಳೂರು, ದಿನಾಂಕ: ೨೬ನೇ ಏಪ್ರಿಲ್ ೨೦೦೪**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಶ್ರೀ ಚಿಕ್ಕಸಿದ್ಧಯ್ಯ ರವರ ಪ್ರಕರಣವನ್ನು ಮತ್ತು ಅವರ ಮನವಿಯನ್ನು ಕಾನೂನಿನ ಅಂಶಗಳನ್ನು ಒಳಗೊಂಡಂತೆ ಸಮಗ್ರವಾಗಿ ಪುನರ್‌ಪರಿಶೀಲಿಸಿ ಶ್ರೀ ಚಿಕ್ಕಸಿದ್ಧಯ್ಯ, ಹೆಚ್‌ಸಿ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 479

## LAW SECRETARIAT

**Sub :** Appointing the II Addl. Public Prosecutor attached to the Court of II Addl. District and Sessions Judge, Mysore to conduct the Counter Case in S. C. No. 174/2003 on the file of Principal District and Sessions Judge, Mysore.

**Read :** Letter No. DPN/ADM/59/2003-04, dated: 27.8.2003, received from the Director of Prosecutions and Government Litigation, Bangalore.

**Govt. Order No. LAW 55 LMC 2004, Bangalore, dated: 6th May 2004**

Government are pleased to appoint the II Additional Public Prosecutor attached to the Court of II Additional District and Sessions Judge, Mysore as Special Public Prosecutor to conduct the Counter Case in S. C. No. 174/2003, on the file of the Principal District and Sessions Judge, Mysore with immediate effect.

By Order and in the Name of the Governor of Karnataka,
**VINEETHA P. SHETTY**
Asst. Solicitor and Ex-Officio,
I/C. Under Secretary to Government, Law Department (Lit-II).

PR-482

**Sub :** Authorising the II Addl. Public Prosecutor attached to the District and Sessions Judge, Court Mysore to conduct the counter Case in SC No:305/99, on the file of the Principal District and Sessions Judge Mysore.

**Read :** Letter No. DPN/ADM/60/2003-04, dated: 27.8.2003,

**Govt. Order No. LAW 1830 LMC 2003, Bangalore, dated: 6th May 2004**

Government are pleased to Authorise the II Additional Public Prosecutor attached to the Court of the II Additional District and Sessions Judge, Mysore to conduct the Counter case in S.C. No:305/99, on the file of the Principal District and Sessions Judge, Mysore with immediate effect.

By Order and in the Name of the Governor of Karnataka,
**VINEETHA P. SHETTY**
Asst. Solicitor and Ex-Officio,
I/C. Under Secretary to Government, Law Department (Lit-II).

PR-483

**Sub :** Appointing the I Additional Public Prosecutor attached to the Court of I Addl. District and Sessions Court, Mysore to conduct counter case in S.C. No: 309/2002 on the file of II Addl. District and Sessions Court, Mysore.

**Read :** Letter No. DPN/ADM/160/2003-04, dated: 13.11.2003,

**Govt. Order No. LAW 52 LMC 2004, Bangalore, dated: 6th May 2004**

Government are pleased to appoint the I Additional Public Prosecutor, attached to the Court of I Addl. District and Sessions Court, Mysore as Special Public Prosecutor, Mysore to conduct counter case in S.C. No: 309/2002, on the file of II Addl. District and Sessions Court, Mysore with immediate effect.

By Order and in the Name of the Governor of Karnataka,
**VINEETHA P. SHETTY**
Asst. Solicitor and Ex-Officio,
I/C. Under Secretary to Government, Law Department (Lit-II).

PR-484

**Sub :** Appointing the Special Public Prosecutor attached to the Court of Fast Track Court-I Mysore to conduct the counter case in S.C. No.338/2000 on the file of III Addl. Fast Track Court, Mysore.

**Read :** Letter No. DPN/ADM/170/2003-04, dated: 15.11.2003,

**Govt. Order No. LAW 58 LMC 2004, Bangalore, dated: 6th May 2004**

Government are pleased to appoint the Special Public Prosecutor attached to the Court of Fast Track Court-I, Mysore as Special Public Prosecutor to conduct the Counter Case in S.C. No. 338/2000 on the file of the III Addl. Fast Track Court-I, Mysore with immediate effect.

By Order and in the Name of the Governor of Karnataka,
**VINEETHA P. SHETTY**
Asst. Solicitor and Ex-Officio,
I/C. Under Secretary to Government, Law Department (Lit-II).

PR-485

**Sub :** Appointing the II Additional Public Prosecutor attached to the Court of II Addl. District and Sessions Judge, Mysore to conduct the counter case in S.C. No: 22/2000 on the file of Principal District and Sessions Judge, Mysore.

**Read :** Letter No. DPN/ADM/50/2003-04, dated: 1.9.2003,

**Govt. Order No. LAW 59 LMC 2004, Bangalore, dated: 5th May 2004**

Government are pleased to appoint the II Addl Public Prosecutor, attached to the Court of II Addl. District and Sessions Judge, Mysore as Special Public Prosecutor, to conduct the counter case in S.C. No: 22/2000, on the file of the Principal District and Sessions Judge, Mysore with immediate effect.

By Order and in the Name of the Governor of Karnataka,
**VINEETHA P. SHETTY**
Asst. Solicitor and Ex-Officio,
I/C. Under Secretary to Government, Law Department (Lit-II).

PR-486

**Sub :** Appointing the II Additional Public Prosecutor attached to the Court of II Addl. District and Sessions Judge, Mysore to conduct the counter case in S.C. No: 224/97 on the file of the Principal District and Sessions Judge, Mysore.

**Read :** Letter No. DPN/ADM/75/2003-04, dated: 6.10.2003, received from the Director of Prosecutions and Government Litigation, Bangalore.

**Govt. Order No. LAW 57 LMC 2004, Bangalore, dated: 5th May 2004**

Government are pleased to appoint the II Addl Public Prosecutor, attached to the Court of II Addl. District and Sessions Judge, Mysore as Special Public Prosecutor, to conduct the counter case in S.C. No: 224/97, on the file of the Principal District and Sessions Judge, Mysore with immediate effect.

By Order and in the Name of the Governor of Karnataka,
**VINEETHA P. SHETTY**
Asst. Solicitor and Ex-Officio,
I/C. Under Secretary to Government, Law Department (Lit-II).

PR-487

**Sub :** Authorisation the II Additional Public Prosecutor attached to the District and Sessions Court, Mysore to conduct the Counter Case in No: SC 332/99 on the file of the Principal District Sessions Court, Mysore.

**Read :** Letter No. DPN/ADM/117/2003-04, dated: 20.09.2003,

**Govt. Order No. LAW 60 LMC 2004, Bangalore, dated: 5th May 2004**

Government are pleased to authorise II Additional Public Prosecutor attached to the court of II Additional Sessions Court Mysore, to conduct the Counter Case A in SC No: 332/99 on the file of the Principal District and Sessions Court, Mysore with immediate effect.

By Order and in the Name of the Governor of Karnataka,

**VINEETHA P. SHETTY**

PR-488

Asst. Solicitor and Ex-Officio,

I/C. Under Secretary to Government, Law Department (Lit-II).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಮೈಸೂರಿನ, ಆಡಳಿತ ತರಬೇತಿ ಸಂಸ್ಥೆಯ ಬೋಧಕರು, ಗ್ರಾಮೀಣ ಸಾಲ ಮತ್ತು ಮಾರುಕಟ್ಟೆ ಹುದ್ದೆಯನ್ನು, ಬೋಧಕರು, ಸೂಕ್ತ ಗ್ರಾಮೀಣ ತಾಂತ್ರಿಕತೆ ಎಂದು ಪುನರ್ ಪದ ನಾಮೀಕರಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ: 3.11.2003ರ ಮೈಸೂರಿನ, ಆಡಳಿತ ತರಬೇತಿ ಸಂಸ್ಥೆಯ ಮಹಾ ನಿರ್ದೇಶಕರ ಅರೆ ಸರ್ಕಾರಿ ಪತ್ರ ಸಂಖ್ಯೆ: ATI.EST.ICR. 66.

**ಪ್ರಸ್ತಾವನೆ:**

ದಿನಾಂಕ: 3.11.2003ರ ತಮ್ಮ ಪತ್ರದಲ್ಲಿ, ಮೈಸೂರಿನ, ಆಡಳಿತ ತರಬೇತಿ ಸಂಸ್ಥೆಯ ಮಹಾ ನಿರ್ದೇಶಕರು, ತಮ್ಮ ಸಂಸ್ಥೆಯಲ್ಲಿರುವ ಬೋಧಕರು, ಗ್ರಾಮೀಣ ಸಾಲ ಮತ್ತು ಮಾರುಕಟ್ಟೆ (Faculty, Rural Credit and Marketing) ಹುದ್ದೆಯನ್ನು ಬೋಧಕರು, ಸೂಕ್ತ ಗ್ರಾಮೀಣ ತಾಂತ್ರಿಕತೆ (Faculty, Appropriate Rural Technology) ಎಂದು ಪುನರ್ ಪದ ನಾಮೀಕರಿಸುವಂತೆ ಕೋರಿದ್ದಾರೆ. ಮೈಸೂರಿನ, ಆಡಳಿತ ತರಬೇತಿ ಸಂಸ್ಥೆಯ ಮಹಾ ನಿರ್ದೇಶಕರ ಕೋರಿಕೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 172 ಇಆತ 2003, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2004**

1996ರ ಆಡಳಿತ ತರಬೇತಿ ಸಂಸ್ಥೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿರುವ, ಬೋಧಕರು, ಗ್ರಾಮೀಣ ಸಾಲ ಮತ್ತು ಮಾರುಕಟ್ಟೆ ಹುದ್ದೆಯನ್ನು 9,580-14,200 ರೂ.ಗಳ ವೇತನ ಶ್ರೇಣಿಯಲ್ಲಿ, ಮುಂದೆ ಯಾವುದೇ ಕಾರಣಕ್ಕೂ ಉನ್ನತೀಕರಿಸದೇ ಇರುವ ಷರತ್ತಿಗೊಳಪಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ಬೋಧಕರು, ಸೂಕ್ತ ಗ್ರಾಮೀಣ ತಾಂತ್ರಿಕತೆ ಎಂದು ಪುನರ್ ಪದ ನಾಮೀಕರಿಸಲಾಗಿದೆ.

ಈ ಆದೇಶವನ್ನು ದಿನಾಂಕ: 6.1.2004 ರಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ, ಸೇವಾ ನಿಯಮಗಳು ವಿಭಾಗವು, ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 01 ಸೇನಿಇ 2004 ಮತ್ತು ಆರ್ಥಿಕ ಇಲಾಖೆಯ ದಿನಾಂಕ: 23.2.2004ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 165 ವೆಚ್ಚ-5: 2004ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.489

**ಹೆಚ್. ಕೆ. ಅನಸೂಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ತರಬೇತಿ).

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 97 (ಭಾಗ) ದಿನಾಂಕ: 17.4.1998.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 99 ದಿನಾಂಕ: 5.4.1999.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2000 ದಿನಾಂಕ: 26.5.2000.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 2001 ದಿನಾಂಕ: 17.4.2002.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2002 ದಿನಾಂಕ: 6.5.2002.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2003 ದಿನಾಂಕ: 1.8.2003.

**ಪ್ರಸ್ತಾವನೆ:**

ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 17.4.1998ರ ಸರ್ಕಾರದ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 12.3.1998 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| 1. | ಹಿರಿಯ ಸಹಾಯಕ : ಭಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5. | ವಾಹನ ಚಾಲಕ | 1 ಹುದ್ದೆ |

ನಂತರ ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು ಅಂತಿಮವಾಗಿ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ: 1.8.2003ರ ಸರ್ಕಾರದ ಆದೇಶದನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 31.3.2004ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಈ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 25 ಸಸಿವಿ 2004, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2004**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 31.4.2004 ರಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ: 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆವಿಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಹಿರಿಯ ಸಹಾಯಕ : ಭಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5. | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.494

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಕಂದಾಯ ಸಚಿವಾಲಯ**

**ವಿಷಯ :** ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಎರಡು ತಾತ್ಕಾಲಿಕ ಹೆಚ್ಚುವರಿ ವಾಣಿಜ್ಯ ತೆರಿಗೆ ಪೀಠಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 45 ಆರ್‌ಎಂಇ 2002, ದಿನಾಂಕ: 25.11.2002.
2. ನಿಬಂಧಕರು ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ ಇವರ ಪತ್ರ ಸಂಖ್ಯೆ: ಸಿಬ್ಬಂದಿ-1: ಸಿಆರ್-34: 2002-03 ದಿನಾಂಕ: 1.09.2003 ಹಾಗೂ ದಿನಾಂಕ: 22.12.2003.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಎರಡು ಹೆಚ್ಚುವರಿ ವಾಣಿಜ್ಯ ತೆರಿಗೆ ಪೀಠಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಪೂರಕ ಹುದ್ದೆಗಳನ್ನು ದಿನಾಂಕ: 25.9.2002 ರಿಂದ ಮುಂದಿನ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ ಇವರು ಉಲ್ಲೇಖ (2)ರ ಪತ್ರದ ಅನ್ವಯ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ನ್ಯಾಯಾಧಿಕರಣದಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಎರಡು ಹೆಚ್ಚುವರಿ ವಾಣಿಜ್ಯ ತೆರಿಗೆ ಪೀಠಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಪೂರಕ ಹುದ್ದೆಗಳನ್ನು ದಿನಾಂಕ: 25.09.2003 ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ.

ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ನ್ಯಾಯಾಧಿಕರಣದಲ್ಲಿ ಮಂಜೂರಾಗಿ ತಾತ್ಕಾಲಿಕವಾಗಿ ಕಾರ್ಯನಿರ್ವಹಿಸುತ್ತಿರುವ ಎರಡು ವಾಣಿಜ್ಯ ತೆರಿಗೆ ಪೀಠಗಳನ್ನು ಅವುಗಳ ಪೂರಕ ಸಿಬ್ಬಂದಿಯೊಡನೆ ದಿನಾಂಕ: 25.9.2003 ರಿಂದ ಮುಂದಿನ ಎರಡು ವರ್ಷಗಳ ಅವಧಿಗೆ ಮುಂದುವರೆಸುವ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 72 ಆರ್‌ಎಂಇ 2003, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2004**

ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇಲ್ಲಿ ಸೃಜಿಸಲಾಗಿರುವ ಎರಡು ಹೆಚ್ಚುವರಿ ವಾಣಿಜ್ಯ ತೆರಿಗೆ ಪೀಠಗಳನ್ನು ಹಾಗೂ ಅವುಗಳಿಗೆ ಸಂಬಂಧಿಸಿದ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 25.09.2003 ರಿಂದ 31.03.2005 ರವರೆಗೆ ಮಾತ್ರ ಮುಂದುವರೆಸಲು ಸರ್ಕಾರ ಮಂಜೂರಾತಿ ನೀಡಿದೆ.

| | | |
|---|---|---|
| 1. | ಜಿಲ್ಲಾ ನ್ಯಾಯಾಧೀಶ ಸದಸ್ಯರು | 2 ಹುದ್ದೆಗಳು |
| 2. | ವಾಣಿಜ್ಯ ತೆರಿಗೆ ಸದಸ್ಯರು | 2 ಹುದ್ದೆಗಳು |
| 3. | ಅಧೀಕ್ಷಕರು | 2 ಹುದ್ದೆಗಳು |
| 4. | ಶೀಘ್ರಲಿಪಿಗಾರರು | 4 ಹುದ್ದೆಗಳು |
| 5. | ಪ್ರಥಮ ದರ್ಜೆ ಸಹಾಯಕರು | 4 ಹುದ್ದೆಗಳು |
| 6. | ಜವಾನರು | 4 ಹುದ್ದೆಗಳು |
| | **ಒಟ್ಟು** | **18 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79 ದಿನಾಂಕ: 27.09.1979ರ ಅನ್ವಯ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತಿಯೋಜಿಸಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು, ಕಂದಾಯ ಇಲಾಖೆ ಇವರು ಟಿಪ್ಪಣಿ ಸಂಖ್ಯೆ: ಆರ್‌ಡಿ 530 ಐಎಫ್‌ಎ 2003, ದಿನಾಂಕ: 30.10.2003 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ತತ್ಸಂಬಂಧ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "ಯೋಜನೇತರ 2052-ಸಚಿವಾಲಯ ಸಾಮಾನ್ಯ ಸೇವೆ-099 ರಾಜಸ್ವ ಮಂಡಳಿ-01 ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ-ವೇತನ" ಇದರಿಂದ ಭರಿಸತಕ್ಕದ್ದು.

ಈ ಆದೇಶದಲ್ಲಿ ಮುಂದುವರೆಸಲಾಗಿರುವ ಎಲ್ಲಾ ಹುದ್ದೆಗಳನ್ನು ಪ್ರಸ್ತುತ ವಿಸ್ತರಣಾ ಅವಧಿ ಮುಗಿದ ನಂತರ ಖಾಯಂ ನೆಲೆಯಲ್ಲಿ ಮುಂದುವರೆಸಲು ನಿಯಮಾನುಸಾರ ಪರಿಶೀಲಿಸಿ ಸರ್ಕಾರದ ಅನುಮತಿ ಪಡೆಯುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.497

**ಬಿ. ಡಿ. ಓಬಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಕೆ.ಎ.ಟಿ).

## ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಸಚಿವಾಲಯ

**ವಿಷಯ :** 1999 ಮತ್ತು 2000ರ ಮಾಸಿಕ ಪಾವತಿಯ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿಯಾಗಿರುವ ನೌಕರರಿಗೆ ಓ.ಟಿ.ಎಸ್.ಅಡಿ ಒಂದೆ ಗಂಟಿನಲ್ಲಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಆರ್ 99 ಎಆರ್‌ಯು 2003 ದಿನಾಂಕ: 9.2.2004.
2. ಕೆಎಐಸಿ ವ್ಯವಸ್ಥಾಪಕ ನಿರ್ದೇಶಕರ ಅ.ಸ.ಪತ್ರದ ಸಂಖ್ಯೆ: ಎಫ್‌ಎ/ಡಿಡಿಪಿಆರ್/2004 ದಿನಾಂಕ: 3.3.2004.
3. ರಾಜ್ಯ ಲೆಕ್ಕ ಪತ್ರ ಇಲಾಖೆ ಪತ್ರದ ಸಂಖ್ಯೆ: ರಾಲೆಪ/21/ಲೆಪ-4/ಕೆಎಐಸಿ/2003-04/4758 ದಿನಾಂಕ: 17.12.2003.

**ಪ್ರಸ್ತಾವನೆ:**

ಉಲ್ಲೇಖ 1ರಲ್ಲಿ ಪ್ರಸ್ತಾಪಿಸಿರುವ ಆದೇಶದನ್ವಯ ಕರ್ನಾಟಕ ಕೃಷಿ ಕೈಗಾರಿಕಾ (ಕೆಎಐಸಿ) ನಿಗಮದಲ್ಲಿ 1999 ಮತ್ತು 2000ರ ಮಾಸಿಕ ಪಾವತಿಯ ಸ್ವಯಂ ನಿವೃತ್ತಿ ಯೋಜನೆ ಅಡಿಯಲ್ಲಿ ನಿವೃತ್ತಿ ಪಡೆದ ನೌಕರರಿಗೆ ಒಂದೇ ಗಂಟಿನಲ್ಲಿ (ಓ.ಟಿ.ಎಸ್) ಎಲ್ಲಾ ಪಾವತಿಗಳನ್ನು ಶೇ. 8ರ ದರ ಕಡಿತದಲ್ಲಿ ಎನ್.ಪಿ.ವಿ. ಆಧಾರದಲ್ಲಿ ಪಾವತಿ ಮಾಡುವುದು ಮತ್ತು ಅಕ್ಟೋಬರ್ 2002 ರಿಂದ ಜುಲೈ 2003 ರವರೆಗೂ ಬಾಕಿ ಇರುವ ಮಾಸಿಕ ಸ್ವಯಂ ನಿವೃತ್ತಿ ಪರಿಹಾರ ಮೊತ್ತ ಕೂಡ ಬಿಡುಗಡೆ ಮಾಡಲು ಆದೇಶಿಸಿದೆ.

ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಉಲ್ಲೇಖ 2ರಲ್ಲಿ ನಮೂದಿಸಿರುವ ಪತ್ರದಲ್ಲಿ 1999 ಮತ್ತು 2000 ಮಾಸಿಕ ಪಾವತಿಯ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿಗೊಂಡಿರುವ ನೌಕರರಿಗೆ ಓ.ಟಿ.ಎಸ್.ನಡಿಯಲ್ಲಿ ಪಾವತಿಮಾಡಲು ಹಣ ಬಿಡುಗಡೆಗಾಗಿ ಕೋರಿರುತ್ತಾರೆ.

ರಾಜ್ಯ ಲೆಕ್ಕ ಪತ್ರ ಇಲಾಖೆಯು ಉಲ್ಲೇಖ 3ರಲ್ಲಿ ನಮೂದಿಸಿರುವ ಪತ್ರದಲ್ಲಿ ಘಟನೆ ಪೂರ್ವ ಲೆಕ್ಕ ತನಿಖೆಯ ವರದಿ ಸಲ್ಲಿಸಿರುತ್ತದೆ. ಈ ವರದಿಯ ಪ್ರಕಾರ 290 ಸ್ವಯಂ ನಿವೃತ್ತಿ ನೌಕರರಿಗೆ ಹಿಂದಿನ ಬಾಕಿ ಮಾಸಿಕ ಪಾವತಿಯ ಮೊತ್ತ ರೂ. 95,17,013/- ಗಳೆಂದು ಮತ್ತು 260 ಸ್ವಯಂ ನಿವೃತ್ತಿ ನೌಕರರಿಗೆ ಒಂದೇ ಗಂಟಿನಲ್ಲಿ ಓ.ಟಿ.ಎಸ್.ಗಾಗಿ ಬೇಕಾಗಿರುವ ಮೊತ್ತ ರೂ.4,29,67,081/- ಎಂದು ತಿಳಿಸಿರುತ್ತದೆ. ಅದರಂತೆ ಒಟ್ಟು ಮೊತ್ತ (ಹಿಂದಿನ ಬಾಕಿ ಮಾಸಿಕ ಪಾವತಿ + ಓ.ಟಿ.ಎಸ್. ಪಾವತಿ) ರೂ.5,24,84,094/- ಗಳೆಂದು ವರದಿ ಸಲ್ಲಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಆರ್ 99 ಎಆರ್‌ಯು 2003, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2004**

ಮೇಲ್ಕಂಡ ಪ್ರಸ್ತಾವನೆ ಅನ್ವಯ ಕೆಎಐಸಿ ಲಿಮಿಟೆಡ್ ಬೆಂಗಳೂರು ಸಂಸ್ಥೆಯಲ್ಲಿ 1999 ಮತ್ತು 2000ರ 80% ಮಾಸಿಕ ಪಾವತಿಯ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಿದ ನೌಕರರಿಗೆ ಹಿಂದಿನ ಬಾಕಿ ಮಾಸಿಕ ಪಾವತಿಗಾಗಿ ಮತ್ತು ಓ.ಟಿ.ಎಸ್.ನಡಿ ಒಂದೇ ಗಂಟಿನಲ್ಲಿ ಲೆಕ್ಕ ಚುಕ್ತಾ ಮಾಡಲು ಬೇಕಾಗುವ ಒಟ್ಟು ಮೊತ್ತವಾದ ರೂ.5,24,84,094/- (ಐದು ಕೋಟಿ ಇಪ್ಪತ್ತು ನಾಲ್ಕು ಲಕ್ಷ ಎಂಬತ್ತು ನಾಲ್ಕು ಸಾವಿರ ತೊಂಬತ್ತು ನಾಲ್ಕು ರೂಪಾಯಿ ಮಾತ್ರ)ಗಳನ್ನು ಸಾಲದ ರೂಪದಲ್ಲಿ ಈ ಕೆಳಕಂಡ ಷರತ್ತುಗಳಿಗನ್ವಯ ಬಿಡುಗಡೆ ಮಾಡಲು ಆದೇಶಿಸಿದೆ.

1. ಬಿಡುಗಡೆ ಮಾಡಿದ ರೂ.5,24,84,094/- ಗಳನ್ನು ಕಟ್ಟುನಿಟ್ಟಾಗಿ 1999 ಮತ್ತು 2000ರ ಮಾಸಿಕ ಪಾವತಿಯ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಿದ ನೌಕರರಿಗೆ ಹಿಂದಿನ ಬಾಕಿ ಮಾಸಿಕ ಪಾವತಿಗಾಗಿ ಮತ್ತು ಓ.ಟಿ.ಎಸ್.ನಡಿ ಲೆಕ್ಕ ಚುಕ್ತಾ ಮಾಡುವುದಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಯಾವುದೇ ಉದ್ದೇಶಕ್ಕೂ ಉಪಯೋಗಿಸಬಾರದು.
2. ಮಂಜೂರಾಗಿರುವ ಮೊತ್ತವನ್ನು ಲೆಕ್ಕಪತ್ರ ಇಲಾಖೆಯ ಪೂರ್ವ ತನಿಖಾ ವಿವರಣಾ ಅನುಬಂಧದಂತೆ ವಿತರಣೆ ಮಾಡಬೇಕು.
3. ಸದರಿ ಹಣವನ್ನು ಪ್ರತ್ಯೇಕ ಬ್ಯಾಂಕ್ ಖಾತೆಯಲ್ಲಿ ಜಮಾ ಮಾಡಿ ಆ ಖಾತೆಯ ಚೆಕ್‌ಗಳ ಮುಖಾಂತರ ಸ್ವಯಂ ನಿವೃತ್ತಿ ಹೊಂದಿದ ನೌಕರರಿಗೆ ವಿತರಿಸುವುದು.

ಈ ಹಣವನ್ನು ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಬೆಂಗಳೂರು ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆಯಿಂದ ಡ್ರಾ ಮಾಡುವುದು.

ಈ ಮೊತ್ತವನ್ನು 2004-05ನೇ ಸಾಲಿನ ಲೆಕ್ಕ ಶೀರ್ಷಿಕೆ 6852-02-190-4-02 (ಎನ್‌ಪಿ) ಸ್ಟೇಟ್ ರಿನಿವಲ್ ಫಂಡ್ ನಿಂದ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅ.ಟಿ.ಸಂಖ್ಯೆ: ಎಫ್‌ಡಿ 364/ವೆಚ್ಚ-1/2004 ದಿನಾಂಕ: 12.4.2004ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.498

**ಹೆಚ್. ವಿ. ರಘುರಾಮ್**

ಜಂಟಿ ನಿರ್ದೇಶಕರು (ಡಬ್ಲ್ಯೂಪಿ) ಡಿಡಿಪಿಆರ್.

**ವಿಷಯ :** ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮದ (ಕೆಎಫ್‌ಐಡಿಸಿ) ಎಲ್ಲಾ ಸಿಬ್ಬಂದಿಗಳಿಗೆ ಸ್ವಯಂ ನಿವೃತ್ತಿ ಯೋಜನೆಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಆರ್ 73 ಎಆರ್‌ಯು, 2003 ಬೆಂಗಳೂರು ದಿನಾಂಕ: 13.11.2003.
2. ಕೆಎಫ್‌ಐಡಿಸಿ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಎಫ್‌ಐಡಿಸಿ:ಡಿಡಿಪಿಆರ್:ವರದಿ:2003-04/857 ದಿನಾಂಕ: 8.01.2004
3. ರಾಜ್ಯ ಲೆಕ್ಕ ಪತ್ರ ಇಲಾಖೆ ಪತ್ರದ ಸಂಖ್ಯೆ: ರಾಲೆಪ/ಎ4/ತನಿಖೆ/ಕೆಎಫ್‌ಐಡಿಸಿ/34 03-04/6061 ದಿನಾಂಕ: 8.03.2004.

**ಪ್ರಸ್ತಾವನೆ:**

ಉಲ್ಲೇಖ 1ರಲ್ಲಿ ಪ್ರಸ್ತಾಪಿಸಿರುವ ಆದೇಶದನ್ವಯ ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮವನ್ನು (ಕೆಎಫ್ಐಡಿಸಿ) ಮುಚ್ಚುವುದು ಮತ್ತು ಕೆಎಫ್ಐಡಿಸಿಯ ಎಲ್ಲಾ ಸಿಬ್ಬಂದಿಗಳಿಗೆ ಸ್ವಯಂ ನಿವೃತ್ತಿ ಸೌಲಭ್ಯವನ್ನು ವಿಸ್ತರಿಸುವುದು ಹಾಗೂ ಇದಕ್ಕೆ ಬೇಕಾಗುವ 121 ಲಕ್ಷ ರೂ.ಗಳ ಸಾಲವನ್ನು ಕೆಎಫ್ಐಡಿಸಿಗೆ ಬಿಡುಗಡೆ ಮಾಡಲು ಆದೇಶ ಹೊರಡಿಸಲಾಗಿದೆ.

ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮದ (ಕೆಎಫ್ಐಡಿಸಿ) ವ್ಯವಸ್ಥಾಪಕ ನಿರ್ದೇಶಕರು ಉಲ್ಲೇಖ 2ರಲ್ಲಿ ನಮೂದಿಸಿರುವ ಪತ್ರದಲ್ಲಿ ಸ್ವಯಂ ನಿವೃತ್ತಿ ಯೋಜನೆಗೆ ಬೇಕಾಗುವ ಹಣ ಬಿಡುಗಡೆಗಾಗಿ ಕೋರಿರುತ್ತಾರೆ.

ರಾಜ್ಯ ಲೆಕ್ಕ ಪತ್ರ ಇಲಾಖೆಯು ಉಲ್ಲೇಖ 3ರಲ್ಲಿ ನಮೂದಿಸಿರುವ ಪತ್ರದಲ್ಲಿ 34 ನೌಕರರ ಸ್ವಯಂ ನಿವೃತ್ತಿ ಯೋಜನೆಯ ಘಟನೆ ಪೂರ್ವ ಲೆಕ್ಕ ತನಿಖೆಯ ವರದಿ ಸಲ್ಲಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಆರ್ 73 ಎಆರ್‌ಯು 2003, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2004**

ಮೇಲ್ಕಂಡ ಪ್ರಸ್ತಾವನೆ ಅನ್ವಯ ಕರ್ನಾಟಕ ಚಲನಚಿತ್ರ ಕೈಗಾರಿಕಾ ಅಭಿವೃದ್ಧಿ ನಿಗಮದ (ಕೆಎಫ್ಐಡಿಸಿ) ಸಂಸ್ಥೆಯಲ್ಲಿರುವ ಎಲ್ಲಾ 34 ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯ ಪಾವತಿಗಾಗಿ ಬೇಕಾಗುವ ಮೊತ್ತವಾದ ರೂ. 1,21,00,000/- (ಒಂದು ಕೋಟಿ ಇಪ್ಪತ್ತೊಂದು ಲಕ್ಷ ರೂಪಾಯಿಗಳು ಮಾತ್ರ) ಸಾಲದ ರೂಪದಲ್ಲಿ ಈ ಕೆಳಕಂಡ ಷರತ್ತುಗಳಿಗನ್ವಯ ಬಿಡುಗಡೆ ಮಾಡಲು ಆದೇಶಿಸಿದೆ.

1. ಬಿಡುಗಡೆ ಮಾಡಿದ ರೂ.1,21,00,000/- ಗಳನ್ನು ಕಟ್ಟುನಿಟ್ಟಾಗಿ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಿದ ನೌಕರರ ಸ್ವಯಂ ನಿವೃತ್ತಿ ಪರಿಹಾರ ಪಾವತಿಗಾಗಿ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಯಾವುದೇ ಉದ್ದೇಶಕ್ಕೂ ಉಪಯೋಗಿಸಬಾರದು.
2. ಮಂಜೂರಾಗಿರುವ ಮೊತ್ತವನ್ನು ಲೆಕ್ಕಪತ್ರ ಇಲಾಖೆಯ ಪೂರ್ವ ತನಿಖಾ ವಿವರಣಾ ಅನುಬಂಧದಂತೆ ವಿತರಣೆ ಮಾಡಬೇಕು.
3. ಸದರಿ ಹಣವನ್ನು ಪ್ರತ್ಯೇಕ ಬ್ಯಾಂಕ್ ಖಾತೆಯಲ್ಲಿ ಜಮಾ ಮಾಡಿ ಆ ಖಾತೆಯ ಚೆಕ್‌ಗಳ ಮುಖಾಂತರ ಸ್ವಯಂ ನಿವೃತ್ತಿ ಹೊಂದಿದ ನೌಕರರಿಗೆ ವಿತರಿಸುವುದು.

ಈ ಹಣವನ್ನು ಸಂದಾಯಿ ರಸೀದಿಯ (Payee's Receipt) ಮೇಲೆ ಆಯುಕ್ತರು, ವಾರ್ತಾ ಇಲಾಖೆ, ಬೆಂಗಳೂರು ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆಯಿಂದ ಡ್ರಾ ಮಾಡುವುದು.

ಈ ಮೊತ್ತವನ್ನು 2004-05ನೇ ಸಾಲಿನ ಲೆಕ್ಕ ಶೀರ್ಷಿಕೆ 6852-02-190-4-02 (ಎನ್‌ಪಿ) ಸ್ಟೇಟ್ ರಿನಿವಲ್ ಫಂಡ್ ನಿಂದ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅ.ಟಿ. ಸಂಖ್ಯೆ: ಎಫ್‌ಡಿ 690/ವೆಚ್ಚ-1/2004 ದಿನಾಂಕ: 21.04.2004ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.499

**ಹೆಚ್. ವಿ. ರಘುರಾಮ್**

ಜಂಟಿ ನಿರ್ದೇಶಕರು (ಡಬ್ಲ್ಯೂಪಿ) ಡಿಡಿಪಿಆರ್.

## PUBLIC WORKS SECRETARIAT

**Sub:** Creation of additional posts in the Information Technology Cell

**Read:** (1) Government Order No. PWD 130 EAP 2001, dated 15-03-2001.
(2) Government Order No. PWD 57 EAP 2002, dated 03-08-2002.
(3) Proceedings of the 8th Project Governing Board held on 10th June 2003.

**Preamble:**

The Karnataka State Highways Improvement Project (KSHIP) is an initiative by the Public Works Department of the Government of Karnataka under the World Bank loan assistance to undertake improvement of 2269 kms of roads consisting of State Highways and Major District Roads. As a part of this Project, an Institutional Development Strategy (IDS) study for PWD was entrusted to the consultant, M/s. Booz Allen & Hamilton Inc., USA. The consultant made broad recommendations for Institutional Strengthening and Reforms of PWD. The Government have examined these recommendations and accepted some of them vide G.O. read at (1). Accordingly, an Information Technology Cell has been created for implementing the e-governance strategy of the Government under the control of the Principal Secretary to Government, PWD. Main activities of the IT Cell include the following:

1. Collection and updation of data on GIS based Road Information System. The information about all the PWD roads, bridges and CDs from 175 Sub-divisions is collected. The data being voluminous the updation on a regular basis at a half yearly period is being done.
2. Annual Road Condition and Traffic Survey data conducted by the Quality Control Divisions of the PWD on the entire length of the PWD roads is to be updated into the Road Information System and analysis is to be carried out.
3. Implementation, modification, updation and monitoring of Project Financial Management System software.
4. To operate data creation and transmission through Karnataka State Wide Area Network (KSWAN)
5. Implementing an e-tendering solution and operating it.

6. Implementing Personnel Management System, Court cases monitoring system, Letter and File Monitoring System in a phased manner from Zonal offices to the Sub-division offices.
7. Interfacing with softwares in the Traffic and Transport department regarding data collection on accident spots, identification of black spots for improvement.

In view of this, it is essential to equip the IT Cell with adequate staff and required equipments for active implementation of computerisation in PWD. At present the sanctioned staff strength in the IT Cell is as follows:

| Sl. No. | Name of the Post | Pay Scale | No. of Posts |
|---|---|---|---|
| 1 | Chief Information Officer (upgraded from the cadre of Assistant Executive Engineer to the cadre of Executive Engineer on promotion of Dr.H.R.Shantharajanna as per G.O. read at (2)) | Rs. 9580-14200 | 1 |
| 2 | Assistant Engineer | Rs. 6000-11200 | 1 |
| 3 | Steno/ Computer Programmer | Rs. 3000 - 5450 | 2 |
| 4 | Group D employee | Rs. 2500 - 3850 | 1 |

The creation of additional posts in the IT Cell of PWD has been approved by the Project Governing Board of KSHIP in its 8th meeting held on 10th June 2003 under the chairmanship of the Chief Secretary to the Government of Karnataka as below (read at (3)).

| Sl. No. | Name of the Post | Pay Scale | No. of Posts | Approval as per the proceedings |
|---|---|---|---|---|
| 1 | Assistant Executive Engineer | Rs. 7400-13120 | 1 | Upgradation of existing one post of Assistant Engineer to the post of Assistant Executive Engineer on promotion of Mr. B.R.Muralidhara |
| 2 | Assistant Engineer | Rs. 6000-11200 | 2 | Creation by re-deploying (shifting) two posts of Assistant Engineers from PWD |
| 3 | Assistant Statistical Officer | Rs. 4575-8400 | 1 | Creation by re-deploying (shifting) one post of Assistant Statistical Officer (post to be filled up by deputation from Department of Economics and Statistics). Alternatively, if the deputation is not feasible, then this activity may be outsourced. |
| 4 | Driver | Rs. 3000-6300 | 1 | Creation by re-deploying (shifting) one post of Driver from PWD or alternatively this activity may be outsourced. |

Hence, the following Order:

**Government Order No. PWD 20 EAP 2004, Bangalore, dated 29th April 2004**

After examining the above proposal in detail, Government is pleased to accord sanction to create the following additional posts in the Information Technology Cell, Public Works Department:

| Sl. No. | Name of the Post | Pay Scale | No. of Posts | Remarks |
|---|---|---|---|---|
| 1 | Assistant Executive Engineer | Rs.7400-13120 | 1 | The post of Assistant Engineer presently held by Mr. B.R.Muralidhara is upgraded to the post of Assistant Executive Engineer and Mr. B.R.Muralidhara is accommodated in the upgraded post. |
| 2 | Assistant Engineer | Rs.6000-11200 | 2 | Creation of two posts of Assistant Engineers by redeploying (shifting) from PWD. |
| 3 | Assistant Statistical Officer | Rs.4575-8400 | 1 | Creation of one post of Assistant Statistical Officer (post to be filled up by deputation from Department of Economics and Statistics). Alternatively, if the deputation is not feasible, then this activity may be outsourced. |
| 4 | Driver | Rs.3000-6300 | 1 | Creation of one post of Driver by re-deploying (shifting) from PWD or alternatively this activity may be outsourced. |

Expenditure on the pay of the officers and staff including TA, DA shall be debited to the Head of Account 3054-01-001-1-02 KSHIP pay-officers.

This Order is issued as per the approval of the Project Governing Board in its 8th meeting held on 10th June 2003 and is also issued in concurrence of Finance Department vide Note No. ಲೋಇ 244: ಆಕೋ:3:2004 ಲೋ.ಇ. (ಆರ್ಥಿಕ ಕೋಶ.3) ದಿನಾಂಕ: 23.4.2004.

By Order and in the Name of the Governor of Karnataka

**G.S. Narasimha Murthy**

Under Secretary to Government,

Public Works Department (EAP)

PR-492

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳಾಗಿ ಪರಿವರ್ತಿಸುವ ಹಾಗೂ ಹಾಲಿ ಇರುವ ರಾಜ್ಯ ಹೆದ್ದಾರಿಗಳನ್ನು ಪುನರ್ ವ್ಯವಸ್ಥೆಗೊಳಿಸುವ ಕುರಿತು

**ಪ್ರಸ್ತಾವನೆ:**

ರಾಜ್ಯದಲ್ಲಿ ಪ್ರಸ್ತುತ 9,829 ಕಿ.ಮೀ. ಉದ್ದದ ರಾಜ್ಯ ಹೆದ್ದಾರಿಗಳು ಹಾಗೂ 38,247 ಕಿ.ಮೀ. ಉದ್ದದ ಜಿಲ್ಲಾ ಮುಖ್ಯ ರಸ್ತೆಗಳು ಇರುತ್ತವೆ. ಕಳೆದ ದಶಕದಲ್ಲಿ ರಾಜ್ಯದಲ್ಲಿನ ಹಲವಾರು ರಾಜ್ಯ ಹೆದ್ದಾರಿಗಳನ್ನು ರಾಷ್ಟ್ರೀಯ ಹೆದ್ದಾರಿಗಳನ್ನಾಗಿ ಪರಿವರ್ತಿಸಲಾಗಿದೆ. ಇದರಿಂದಾಗಿ 1992ರಲ್ಲಿ 11,288 ಕಿ.ಮೀ. ಉದ್ದವಿದ್ದ ರಾಜ್ಯ ಹೆದ್ದಾರಿ ಜಾಲವು ಹಾಲಿ 9,829 ಕಿ.ಮೀ. ಉದ್ದ ಇರುತ್ತದೆ. ಇದರಂತೆಯೇ ಹಲವು ಪ್ರಮುಖ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಪರಿವರ್ತಿಸುವುದು ಅವಶ್ಯವಿರುತ್ತದೆ.

ಭಾರತೀಯ ರಸ್ತೆ ಮಹಾಸಭೆಯ (Indian Roads Congress) ರಸ್ತೆ ಅಭಿವೃದ್ಧಿ ಕುರಿತ "ಲಕ್ನೋ ಯೋಜನೆ 1981–2001"ರ ಪ್ರಕಾರ 5000 ಹಾಗೂ ಹೆಚ್ಚಿನ ಜನಸಂಖ್ಯೆಯುಳ್ಳ ಪಟ್ಟಣಗಳನ್ನು ರಾಷ್ಟ್ರೀಯ ಹೆದ್ದಾರಿ ಹಾಗೂ ರಾಜ್ಯ ಹೆದ್ದಾರಿಗಳ ಒಟ್ಟಾರೆ ಜಾಲದಿಂದ ಸಂಪರ್ಕಗೊಳಿಸಬೇಕಿದೆ ಹಾಗೂ ಈ ಜಾಲವು ಸಣ್ಣ ಬಂದರುಗಳು, ಜಿಲ್ಲಾ ಕೇಂದ್ರಸ್ಥಾನಗಳು, ಯಾತ್ರಾ ಸ್ಥಳಗಳು, ಪ್ರವಾಸಿ ತಾಣಗಳು, ಮಾರುಕಟ್ಟೆ ಸ್ಥಳಗಳು, ಐತಿಹಾಸಿಕ ಸ್ಥಳಗಳು, ಔದ್ಯೋಗಿಕ ಪ್ರದೇಶಗಳನ್ನು ಸಂಪರ್ಕಿಸುವಂತಾಗಿರಬೇಕು. ರಾಜ್ಯದಲ್ಲಿ 1991ರ ಜನಗಣತಿಯ ಮೇರೆಗೆ 983 ಪಟ್ಟಣಗಳು 5000 ಹಾಗೂ ಹೆಚ್ಚಿನ ಜನಸಂಖ್ಯೆಯುಳ್ಳ ಪಟ್ಟಣಗಳಾಗಿವೆ. ಈ ಪೈಕಿ 164 ಪಟ್ಟಣಗಳು ರಾಷ್ಟ್ರೀಯ ಹೆದ್ದಾರಿಯ, 237 ಪಟ್ಟಣಗಳು ರಾಜ್ಯ ಹೆದ್ದಾರಿಯ, 366 ಪಟ್ಟಣಗಳು ಜಿಲ್ಲಾ ಮುಖ್ಯ ರಸ್ತೆಯ ಹಾಗೂ 13 ಪಟ್ಟಣ ಪ್ರದೇಶಗಳು ನಗರ ರಸ್ತೆಯ ಸಂಪರ್ಕ ಹೊಂದಿರುತ್ತವೆ. ಇನ್ನುಳಿದ 203 ಪಟ್ಟಣಗಳು ಇತರೆ ಜಿಲ್ಲಾ ರಸ್ತೆಗಳು: ಹಳ್ಳಿ ರಸ್ತೆಗಳ ಸಂಪರ್ಕ ಮಾತ್ರ ಹೊಂದಿರುತ್ತವೆ. ಆದುದರಿಂದ ಈಗಿರುವ ಕೆಲವು ಜಿಲ್ಲಾ ಮುಖ್ಯ ರಸ್ತೆಗಳನ್ನು ಸಂಪರ್ಕವಿರುವಂತೆ ಜೋಡಿಸಿ (ಕೆಲವೆಡೆ ಹಳ್ಳಿ ರಸ್ತೆ: ಇತರೆ ಜಿಲ್ಲಾ ರಸ್ತೆಯ ಕೊಂಡಿಗಳನ್ನು ಅತೀ ಅವಶ್ಯವಿರುವಲ್ಲಿ ಮಾತ್ರ ಸೇರಿಸಿಕೊಂಡು) ರಾಜ್ಯ ಹೆದ್ದಾರಿಗಳನ್ನಾಗಿ ಪರಿವರ್ತಿಸಲು ಕ್ರಮ ಕೈಗೊಳ್ಳಲಾಗಿದೆ. ಭವಿಷ್ಯದಲ್ಲಿ ಈ ರಸ್ತೆಗಳ ಮೇಲಿನ ವಾಹನ ದಟ್ಟಣೆಯನ್ನು ವೀಕ್ಷಿಸಿ ಇವುಗಳನ್ನು ರಾಷ್ಟ್ರೀಯ ಹೆದ್ದಾರಿಗಳನ್ನಾಗಿ ಪ್ರಸ್ತಾಪಿಸಬೇಕಾದ ಸಂದರ್ಭಕ್ಕೂ ಸಹ ಇದರಿಂದ ಸರಳ ವ್ಯವಸ್ಥೆ ಸೃಜಿಸಿದಂತಾಗುತ್ತದೆ.

ಮುಂದುವರೆದು ರಾಜ್ಯದಲ್ಲಿ ಪ್ರಸ್ತುತ ಇರುವ ರಾಜ್ಯ ಹೆದ್ದಾರಿಗಳೊಂದಿಗೆ ಈ ರೀತಿ ಮೇಲ್ದರ್ಜೆಗೇರಿಸಬೇಕಾದ ಹಲವು ಜಿಲ್ಲಾ ಮುಖ್ಯ ರಸ್ತೆಗಳನ್ನು ಸಂಪರ್ಕಿಸುವುದು ಕೆಲವೆಡೆ ಅವಶ್ಯವಿರುತ್ತದೆ. ಆದುದರಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳಾಗಿ ಪರಿವರ್ತಿಸುವ ಹಾಗೂ ಹಾಲಿ ಇರುವ ರಾಜ್ಯ ಹೆದ್ದಾರಿಗಳನ್ನು ಪುನರ್‌ವ್ಯವಸ್ಥೆಗೊಳಿಸುವ ಉದ್ದೇಶಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋ.ಇ. 15 ಮಾ.ತಂ.ಕೋ. 2003, ಬೆಂಗಳೂರು ದಿನಾಂಕ 18ನೇ ಮೇ 2004**

ರಾಜ್ಯದಲ್ಲಿ ಪ್ರಸ್ತುತ ಇರುವ ಹಲವು ಜಿಲ್ಲಾ ಮುಖ್ಯ ರಸ್ತೆಗಳನ್ನು ಸಂಪರ್ಕವಿರುವಂತೆ ಜೋಡಿಸಿ (ಅತೀ ಅವಶ್ಯವಿರುವಲ್ಲಿ ಮಾತ್ರ ಹಳ್ಳಿ ರಸ್ತೆ: ಇತರೆ ಜಿಲ್ಲಾ ರಸ್ತೆಯ ಕೊಂಡಿಗಳನ್ನು ಸಹ ಸೇರಿಸಿಕೊಂಡು) ಭಾರತೀಯ ರಸ್ತೆ ಮಹಾಸಭೆಯ (Indian Roads Congress) ರಸ್ತೆ ಅಭಿವೃದ್ಧಿ ಕುರಿತ "ಲಕ್ನೋ ಯೋಜನೆ 1981–2001"ರ ಪ್ರಕಾರ ಮೂಲಭೂತ ಗುಣಧರ್ಮಗಳನ್ನು ಅನುಸರಿಸಿ ಹಾಗೂ ಹಾಲಿ ಇರುವ ರಾಜ್ಯ ಹೆದ್ದಾರಿಗಳನ್ನು ಪುನರ್‌ವ್ಯವಸ್ಥೆಗೊಳಿಸಿ ಈ ಆದೇಶದೊಂದಿಗಿನ ಅನುಬಂಧದಲ್ಲಿರುವಂತೆ ರಾಜ್ಯ ಹೆದ್ದಾರಿಗಳೆಂದು ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಹಾಗೂ ಅವರ ಹೆಸರಿನಲ್ಲಿ

**ಆರ್.ಮಂಜುಳ**

ಸರ್ಕಾರದ ಅಧೀನ ಕಾರ್ಯದರ್ಶಿ(ನಬಾರ್ಡ್), ಲೋಕೋಪಯೋಗಿ ಇಲಾಖೆ.

**ಅನುಬಂಧ**

**(ಸರ್ಕಾರದ ಆದೇಶ ಸಂಖ್ಯೆ: ಲೋ.ಇ. 15 ಮಾ.ತಂ.ಕೋ. 2003, ಬೆಂಗಳೂರು ದಿನಾಂಕ 18–05–2004)**

| ಕ್ರಮ ಸಂಖ್ಯೆ | ರಾಜ್ಯ ಹೆದ್ದಾರಿ ಸಂಖ್ಯೆ | ರಾಜ್ಯ ಹೆದ್ದಾರಿಗಳ ವಿವರ (ಜಿಲ್ಲಾ ಮುಖ್ಯ ರಸ್ತೆ: ಹಳ್ಳಿ ರಸ್ತೆ ಗಳನ್ನು ಸಹ ಮೇಲ್ದರ್ಜೆಗೇರಿಸಿ ಹಾಗೂ ಜೋಡಿಸಿಕೊಂಡು ಪುನರ್‌ವ್ಯವಸ್ಥೆಗೊಳಿಸಿದಂತೆ) | ರಾಜ್ಯ ಹೆದ್ದಾರಿಯ ಉದ್ದ (ಕಿ.ಮೀ.) |
|---|---|---|---|
| 1 | 2 | 3 | 4 |
| 1 | 1 | ಪಡುಬಿದ್ರಿ ಗೋಕಾಕ ರಾಜ್ಯ ಹೆದ್ದಾರಿ (ಕಾರ್ಕಳ, ಆಗುಂಬೆ, ತೀರ್ಥಹಳ್ಳಿ, ಆನಂದಪುರ, ಹಾನಗಲ್, ತಡಸ, ಕಲಘಟಗಿ, ಧಾರವಾಡ, ಉಪ್ಪಿನಬೆಟಗೇರಿ, ಬೆಳವಡಿ, ಬೈಲಹೊಂಗಲ, ವಣ್ಣೂರ ಮೂಲಕ) | 450 |
| 2 | 2 | ಎಕ್ಕುಂಬಿ ಮೊಳಕಾಲ್ಮೂರು ರಾಜ್ಯ ಹೆದ್ದಾರಿ (ಹಾವೇರಿ, ಮೈಲಾರ, ಹರಪನಹಳ್ಳಿ, ಕೂಡ್ಲಿಗಿ ಮೂಲಕ ಆಂಧ್ರ ಪ್ರದೇಶ ರಾಜ್ಯ ಗಡಿಯವರೆಗೆ) | 235 |
| 3 | 3 | ಹುಣಸನಹಳ್ಳಿ ಚಿಕ್ಕಹಳ್ಳಿ ರಾಜ್ಯ ಹೆದ್ದಾರಿ (ತಮಿಳುನಾಡು ರಾಜ್ಯ ಗಡಿಯಿಂದ ಕನಕಪುರ, ರಾಮನಗರ, ಮಾಗಡಿ, ಸೋಲೂರು, ಸೋಂಪುರ, ಕೊರಟಗೆರೆ, ಮಧುಗಿರಿ, ಪಾವಗಡ, ಮೂಲಕ ಆಂಧ್ರಪ್ರದೇಶ ರಾಜ್ಯ ಗಡಿಯವರೆಗೆ) | 249 |
| 4 | 4 | ಕಮಲ್‌ನಗರ ಗೂನಳ್ಳಿ ರಾಜ್ಯ ಹೆದ್ದಾರಿ (ಮಹಾರಾಷ್ಟ್ರ ರಾಜ್ಯ ಗಡಿಯಿಂದ ಹಲಬರ್ಗಾ, ಬೀದರ್ ಮೂಲಕ ಆಂಧ್ರ ಪ್ರದೇಶ ರಾಜ್ಯ ಗಡಿಯವರೆಗೆ) | 69 |
| 5 | 5 | ಬಂಗಾರಪೇಟೆ ಬಾಗೇಪಲ್ಲಿ ರಾಜ್ಯ ಹೆದ್ದಾರಿ (ಕೋಲಾರ, ಚಿಂತಾಮಣಿ ಮೂಲಕ) | 106 |
| 6 | 6 | ಕಾರವಾರ ಇಳಕಲ್ ರಾಜ್ಯ ಹೆದ್ದಾರಿ (ಕೈಗಾ, ಎಲ್ಲಾಪುರ, ಮುಂಡಗೋಡ, ಬಂಕಾಪುರ, ಸವಣೂರ, ಗದಗ, ಗಜೇಂದ್ರಗಢ, ಹನುಮಸಾಗರ ಮೂಲಕ) | 332 |
| 7 | 7 | ಶ್ರೀರಂಗಪಟ್ಟಣ ಅರಸೀಕೆರೆ ರಾಜ್ಯ ಹೆದ್ದಾರಿ (ಪಾಂಡವಪುರ, ಕೆ.ಆರ್.ಪೇಟೆ, ಚನ್ನರಾಯಪಟ್ಟಣ ಮೂಲಕ) | 108 |

| 1 | 2 | 3 | 4 |
|---|---|---|---|
| 8 | 8 | ಹಿರಿಸಾವೆ ಶನಿವಾರಸಂತೆ ರಾಜ್ಯ ಹೆದ್ದಾರಿ (ಶ್ರವಣಬೆಳಗೊಳ, ಚನ್ನರಾಯಪಟ್ಟಣ, ಹೊಳೆನರಸೀಪುರ, ಅರಕಲಗೂಡು ಮೂಲಕ) | 94 |
| 9 | 9 | ಯಲಹಂಕಾ ದೊಡ್ಡಬಳ್ಳಾಪುರ ರಾಜ್ಯ ಹೆದ್ದಾರಿ (ಕೊಡಮಲಕುಂಟ, ಗೌರಿಬಿದನೂರು ಮೂಲಕ) | 74 |
| 10 | 10 | ಸರಸಾಂಬಾ ರಿಬ್ಬನಪಲ್ಲಿ ರಾಜ್ಯ ಹೆದ್ದಾರಿ (ಆಳಂದ, ಗುಲಬರ್ಗಾ, ಸೇಡಂ ಮೂಲಕ) | 147 |
| 11 | 11 | ಹುಳಸೂರು ಮಹಾಗಾಂವ್ ರಾಜ್ಯ ಹೆದ್ದಾರಿ (ಬಲಕುಂದ, ಬಸವಕಲ್ಯಾಣ, ಮುಡಬಿ ಮೂಲಕ) | 64 |
| 12 | 12 | ಬಿಜಾಪುರ ಸಂಕೇಶ್ವರ ರಾಜ್ಯ ಹೆದ್ದಾರಿ (ರಾಷ್ಟ್ರೀಯ ಹೆದ್ದಾರಿ 13 ರಿಂದ ಅಥಣಿ, ಚಿಕ್ಕೋಡಿ ಮೂಲಕ ರಾಷ್ಟ್ರೀಯ ಹೆದ್ದಾರಿ 4 ರ ವರೆಗೆ) | 179 |
| 13 | 13 | ದೇವಸುಗೂರು ಕಟಗೋಡ ರಾಜ್ಯ ಹೆದ್ದಾರಿ (ರಾಯಚೂರು ಮೂಲಕ) | 52 |
| 14 | 14 | ರಾಮದುರ್ಗ ಮಾನ್ವಿ ರಾಜ್ಯ ಹೆದ್ದಾರಿ (ಬದಾಮಿ, ಪಟ್ಟದಕಲ್, ಹುನಗುಂದ, ನೀರಲಕೇರಿ, ಮುದಗಲ್, ಮಸ್ಕಿ, ಬಸಾಪುರ, ಪೋತ್ನಾಳ್, ಚೀಕಲಪರ್ವಿ ಮೂಲಕ) | 212 |
| 15 | 15 | ವನಮಾರಪಲ್ಲಿ ರಾಯಚೂರು ರಾಜ್ಯ ಹೆದ್ದಾರಿ (ಔರಾದ್, ಸಂತಪುರ, ಬೀದರ್, ಚಿಂಚೋಳಿ, ಸೇಡಂ, ಯಾದಗಿರಿ, ಹತ್ತಿಗುಡೂರು, ದೇವದುರ್ಗ ಮೂಲಕ) | 290 |
| 16 | 16 | ಸಿಂಧಗಿ ಕೋಡಂಗಲ್ ರಾಜ್ಯ ಹೆದ್ದಾರಿ (ಶಹಾಪುರ, ಖಾನಾಪುರ, ಯಾದಗಿರಿ, ಗುರುಮಿಟಕಲ್ ಮೂಲಕ ಆಂಧ್ರ ಪ್ರದೇಶ ರಾಜ್ಯ ಗಡಿಯವರೆಗೆ) | 152 |
| 17 | 17 | ಬೆಂಗಳೂರು ಮೈಸೂರು ರಾಜ್ಯ ಹೆದ್ದಾರಿ (ರಾಮನಗರ, ಚನ್ನಪಟ್ಟಣ, ಮದ್ದೂರು, ಮಂಡ್ಯ ಶ್ರೀರಂಗಪಟ್ಟಣ ಮೂಲಕ) | 144 |
| 18 | 18 | ಮುಧೋಳ ನಿಪ್ಪಾಣಿ ರಾಜ್ಯ ಹೆದ್ದಾರಿ (ಚಿಕ್ಕೋಡಿ ಮೂಲಕ) | 111 |
| 19 | 19 | ಶ್ರೀರಂಗಪಟ್ಟಣ ಜೇವರ್ಗಿ ರಾಜ್ಯ ಹೆದ್ದಾರಿ (ನಾಗಮಂಗಲ, ಹಿರಿಯೂರು, ಚಳ್ಳಕೆರೆ, ಬಳ್ಳಾರಿ, ಶಿರಗುಪ್ಪ, ಸಿಂಧನೂರು, ಲಿಂಗಸುಗೂರು, ಸುರಪುರ, ಶಹಾಪುರ ಮೂಲಕ ಹಾಗೂ ಗುಲ್ಬರ್ಗ ನಗರದಲ್ಲಿ ಉಳಿಕೆ ಭಾಗ) | 611 |
| 20 | 20 | ರಾಯಚೂರು ಬಾಚಿ ರಾಜ್ಯ ಹೆದ್ದಾರಿ (ಲಿಂಗಸುಗೂರು, ಹುನಗುಂದ, ಬಾಗಲಕೋಟೆ, ಲೋಕಾಪುರ, ಯರಗಟ್ಟಿ, ಬೆಳಗಾಂವ್ ಮೂಲಕ) | 354 |
| 21 | 21 | ಹಳೇಬೀಡು ಆನೆಚೂಕೂರು ರಾಜ್ಯ ಹೆದ್ದಾರಿ (ಹಾಸನ, ಅರಕಲಗೂಡು, ಪಿರಿಯಾಪಟ್ಟಣ ಮೂಲಕ) | 124 |
| 22 | 22 | ಗುಲಬರ್ಗಾ ಹೊಸೂರು ರಾಜ್ಯ ಹೆದ್ದಾರಿ (ಅಫಜಲ್‌ಪುರ ಮೂಲಕ ಮಹಾರಾಷ್ಟ್ರ ರಾಜ್ಯ ಗಡಿಯವರೆಗೆ) | 100 |
| 23 | 23 | ಕಲಮಲಾ ಶಿಗ್ಗಾಂವ್ ರಾಜ್ಯ ಹೆದ್ದಾರಿ (ಮಾನ್ವಿ ಸಿಂಧನೂರು, ಗಂಗಾವತಿ, ಗಿಣಿಗೇರಾ, ಕೊಪ್ಪಳ, ಮುಂಡರಗಿ, ಲಕ್ಷ್ಮೇಶ್ವರ, ಗುಡಿಗೇರಿ ಮೂಲಕ | 350 |
| 24 | 24 | ತರೀಕೆರೆ ಧರ್ಮಾಪುರ ರಾಜ್ಯ ಹೆದ್ದಾರಿ (ಹೊಸದುರ್ಗ, ವಿ.ವಿ.ಪುರ, ಹಿರಿಯೂರು ಮೂಲಕ) | 137 |
| 25 | 25 | ಹೊಸಪೇಟೆ ಶಿವಮೊಗ್ಗ ರಾಜ್ಯ ಹೆದ್ದಾರಿ (ಮರಿಯಮ್ಮನಹಳ್ಳಿ, ಹರಪನಹಳ್ಳಿ, ಹರಿಹರ, ಹೊನ್ನಾಳಿ ಮೂಲಕ) | 181 |
| 26 | 26 | ಹಲಗೇರಿ ಹುಲಿಕಲ್ಲು ರಾಜ್ಯ ಹೆದ್ದಾರಿ (ಹೊನ್ನಾಳಿ, ಆಯನೂರು, ಅರಸಾಲು, ಹೊಸನಗರ ಮೂಲಕ) | 190 |
| 27 | 27 | ವಿರಾಜಪೇಟೆ ಬೈಂದೂರು ರಾಜ್ಯ ಹೆದ್ದಾರಿ (ಮಡಿಕೇರಿ, ಸೋಮವಾರಪೇಟೆ, ಸಕಲೇಶಪುರ, ಮೂಡಿಗೆರೆ, ವಸ್ತಾರೆ, ಜಯಪುರ, ಶೃಂಗೇರಿ, ಬೇಗಾರ್, ಆಗುಂಬೆ ಮೂಲಕ) | 375 |
| 28 | 28 | ಸೂಪಾ ಹೆಬಸೂರು ರಾಜ್ಯ ಹೆದ್ದಾರಿ (ಹಳಿಯಾಳ, ಧಾರವಾಡ ಮೂಲಕ) | 99 |
| 29 | 29 | ಮುದುಗಲ್ ಕುಡಿತಿನಿ ರಾಜ್ಯ ಹೆದ್ದಾರಿ (ತಾವರಗೆರೆ, ಗಂಗಾವತಿ, ಕಂಪ್ಲಿ ಮೂಲಕ) | 117 |
| 30 | 30 | ಸಿಂಧನೂರು ಹೆಮ್ಮಡಗಾ ರಾಜ್ಯ ಹೆದ್ದಾರಿ (ಕುಷ್ಟಗಿ, ರೋಣ, ಸೌಂದತ್ತಿ, ಬೆಳವಡಿ, ಬೇಕವಾಡ, ಖಾನಾಪುರ ಮೂಲಕ) | 306 |
| 31 | 31 | ಜತ್ ಜಾಂಬೋಟಿ ರಾಜ್ಯ ಹೆದ್ದಾರಿ (ಅನಂತಪುರ, ಅಥಣಿ, ಗುರಲಾಪುರ, ಗೋಕಾಕ, ನೇಸರಗಿ, ಬೈಲಹೊಂಗಲ, ಖಾನಾಪುರ ಮೂಲಕ) | 245 |
| 32 | 32 | ಉಮರ್ಗಾ ಸುಲೇಪೇಟೆ ರಾಜ್ಯ ಹೆದ್ದಾರಿ (ಮಹಾರಾಷ್ಟ್ರ ರಾಜ್ಯ ಗಡಿಯಿಂದ ಆಳಂದ, ಮಹಾಗಾಂವ್, ಚಿಂಚೊಳ್ಳಿ ಮೂಲಕ) | 119 |
| 33 | 33 | ಕೊರಟಗೆರೆ ಬಾವಲಿ ರಾಜ್ಯ ಹೆದ್ದಾರಿ (ತುಮಕೂರು, ಕುಣಿಗಲ್, ಮದ್ದೂರು, ಮಳವಳ್ಳಿ, ಮೈಸೂರು, ಹೆಚ್.ಡಿ.ಕೋಟೆ ಮೂಲಕ) | 273 |

| 1 | 2 | 3 | 4 |
|---|---|---|---|
| 34 | 34 | ಔರಾದ್ ಸದಾಶಿವಗಢ ರಾಜ್ಯ ಹೆದ್ದಾರಿ (ಭಾಲ್ಕಿ, ಬಸವಕಲ್ಯಾಣ, ಆಳಂದ, ಅಫಜಲ್‌ಪುರ, ಇಂಡಿ, ವಿಜಾಪುರ, ಜಮಖಂಡಿ, ಮುಧೋಳ, ಲೋಕಾಪುರ, ರಾಮದುರ್ಗ, ಸೌಂದತ್ತಿ, ಧಾರವಾಡ, ರಾಮನಗರ, ಸೂಪಾ, ಅಣಶಿ ಮೂಲಕ) | 666 |
| 35 | 35 | ಶಿಡ್ಲಘಟ್ಟ ಆನೇಕಲ್ ರಾಜ್ಯ ಹೆದ್ದಾರಿ (ಹೊಸಕೋಟೆ, ಕಾಡಗೋಡಿ ಮೂಲಕ) | 89 |
| 36 | 36 | ಕೊಪ್ಪಳ ಕ್ಯಾದಿಗುಪ್ಪ ರಾಜ್ಯ ಹೆದ್ದಾರಿ (ಬೇವೂರ, ಕುಷ್ಟಗಿ ಮೂಲಕ) | 70 |
| 37 | 37 | ಸುಬ್ರಮಣ್ಯ ಉಡುಪಿ ರಾಜ್ಯ ಹೆದ್ದಾರಿ (ಧರ್ಮಸ್ಥಳ, ಬೆಳ್ತಂಗಡಿ, ಕಾರ್ಕಳ ಮೂಲಕ) | 132 |
| 38 | 38 | ಕೊಳ್ಳೇಗಾಲ ಹಾಸನೂರು ಘಾಟ್ ರಾಜ್ಯ ಹೆದ್ದಾರಿ | 64 |
| 39 | 39 | ಬೆಂಗಳೂರು ಹೆಸರಘಟ್ಟ ರಾಜ್ಯ ಹೆದ್ದಾರಿ | 13 |
| 40 | 40 | ಮೈಲಾರ ತೋರಣಗಲ್ಲು ರಾಜ್ಯ ಹೆದ್ದಾರಿ (ಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ಮೂಲಕ) | 162 |
| 41 | 41 | ಶಿರಡಾನ್ ಲಿಂಗಸುಗೂರು ರಾಜ್ಯ ಹೆದ್ದಾರಿ (ಝಳಕಿ, ಇಂಡಿ, ದೇವರ ಹಿಪ್ಪರಗಿ, ಹೂವಿನ ಹಿಪ್ಪರಗಿ, ಮುದ್ದೇಬಿಹಾಳ, ನಾರಾಯಣಪುರ ಮೂಲಕ) | 197 |
| 42 | 42 | ಅಂಕೋಲಾ ಜೋಳದರಾಶಿ ಹಳೆಯ ರಾಜ್ಯ ಹೆದ್ದಾರಿಯ ಉಳಿಕೆ ಭಾಗಗಳು (ಕೊಪ್ಪಳ ಪಟ್ಟಣದಲ್ಲಿನ ರೈಲ್ವೆಸ್ಟೇಶನ್ ರಸ್ತೆ, ಮುನಿರಾಬಾದ್ ಪಟ್ಟಣದೊಳಗಿನ ರಸ್ತೆ, ಜೋಳದರಾಶಿಯಿಂದ ಚಳಗುರ್ಕಿ ಮೂಲಕ ಆಂಧ್ರಪ್ರದೇಶ ರಾಜ್ಯ ಗಡಿಯವರೆಗೆ) | 11 |
| 43 | 43 | ತಿಕೋಟ ಕನಮಡಗಿ ರಾಜ್ಯ ಹೆದ್ದಾರಿ | 23 |
| 44 | 44 | ಸಂಕೇಶ್ವರ ಕಮತಗಿ ರಾಜ್ಯ ಹೆದ್ದಾರಿ (ಹುಕ್ಕೇರಿ, ಘಟಪ್ರಭ, ಅರಭಾವಿ, ಲೋಕಾಪುರ, ಕೆರಕಲಮಟ್ಟಿ, ಅಗಸನಕೊಪ್ಪ, ಗುಳೇದಗುಡ್ಡ ಮೂಲಕ) | 160 |
| 45 | 45 | ಅರಭಾವಿ ಚಳ್ಳಕೆರೆ ರಾಜ್ಯ ಹೆದ್ದಾರಿ (ಗೋಕಾಕ, ನರಗುಂದ, ಶಲವಡಿ, ಶಿರಹಟ್ಟಿ, ಮುಂಡರಗಿ, ಹಡಗಲಿ, ಮೈಲಾರ, ಇಟಗಿ, ಉಜ್ಜಿನಿ, ಜಗಳೂರು ಮೂಲಕ) | 310 |
| 46 | 46 | ಮುಂಡಗೋಡ ಅಣಶಿ ರಾಜ್ಯ ಹೆದ್ದಾರಿ (ಕಲಘಟಗಿ, ಹಳಿಯಾಳ, ದಾಂಡೇಲಿ ಮೂಲಕ) | 136 |
| 47 | 47 | ಮಂಡ್ಯ ಹಡಗಲಿ ರಾಜ್ಯ ಹೆದ್ದಾರಿ (ಮೇಲುಕೋಟೆ, ಶ್ರವಣಬೆಳಗೊಳ, ತಿಪಟೂರು, ಹುಳಿಯಾರು, ಹೊಸದುರ್ಗ, ಹೊಳಲ್ಕೆರೆ, ಆನಗೋಡು, ಹರಪನಹಳ್ಳಿ ಮೂಲಕ) | 354 |
| 48 | 48 | ಕುಮಟಾ ಕೊಡಮಡಗಿ ರಾಜ್ಯ ಹೆದ್ದಾರಿ (ಸಿದ್ದಾಪುರ, ಸೊರಬ, ಶಿಕಾರಿಪುರ, ಹೊನ್ನಾಳಿ, ಬಸವಾಪಟ್ಟಣ, ಚಿತ್ರದುರ್ಗ, ಚಳ್ಳಕೆರೆ, ಪಾವಗಡ ಮೂಲಕ) | 390 |
| 49 | 49 | ಸಂಡೂರು ಸಿರುಗುಪ್ಪ ರಾಜ್ಯ ಹೆದ್ದಾರಿ (ಹೊಸಪೇಟೆ, ಕಂಪ್ಲಿ ಮೂಲಕ) | 106 |
| 50 | 50 | ಭಟ್ಕಳ ಸೊರಬ ರಾಜ್ಯ ಹೆದ್ದಾರಿ (ಜೋಗ, ಮಾವಿನಗುಂಡಿ, ಸಿದ್ದಾಪುರ, ಚಂದ್ರಗುತ್ತಿ ಮೂಲಕ) | 128 |
| 51 | 51 | ಬಸವಕಲ್ಯಾಣ ರಾಯಚೂರು ರಾಜ್ಯ ಹೆದ್ದಾರಿ (ಗುಲಬರ್ಗಾ, ಶಹಾಬಾದ್, ರಾವೂರು, ಯಾದಗಿರಿ ಮೂಲಕ) | 190 |
| 52 | 52 | ತೀರ್ಥಹಳ್ಳಿ ಕುಂದಾಪುರ ರಾಜ್ಯ ಹೆದ್ದಾರಿ (ನಗರ, ಬಲಬೇರೆ, ಹೊಸಂಗಡಿ, ಕೋಣಜಬಸೂರ ಮೂಲಕ) | 84 |
| 53 | 53 | ಕಾಗವಾಡ ಕಲಾದಗಿ ರಾಜ್ಯ ಹೆದ್ದಾರಿ (ಶೇಡಬಾಳ, ಕುಡಚಿ, ತೇರದಾಳ, ಜಮಖಂಡಿ, ಕಾತರಕಿ ಮೂಲಕ) | 122 |
| 54 | 54 | ಜಾಂಬೋಟಿ ರಬಕವಿ ರಾಜ್ಯ ಹೆದ್ದಾರಿ (ಪೀರನವಾಡಿ, ಬೆಳಗಾಂವ, ಬೂದಿಹಾಳ, ಅಕ್ಕತಂಗೇರಹಾಳ, ಕೊಳವಿ, ಮಮದಾಪುರ, ಧವಳೇಶ್ವರ, ಮಹಾಲಿಂಗಪುರ ಮೂಲಕ) | 130 |
| 55 | 55 | ಯರಗಟ್ಟಿ ಬಬಲೇಶ್ವರ ರಾಜ್ಯ ಹೆದ್ದಾರಿ (ಯಾದವಾಡ, ಮುಧೋಳ, ಮಂಟೂರ, ಚಿಕ್ಕಗಲಗಲಿ ಮೂಲಕ) | 108 |
| 56 | 56 | ಬಿಡಿ ಬೆಳವಣಕಿ ರಾಜ್ಯ ಹೆದ್ದಾರಿ (ಕಿತ್ತೂರ, ಗೊಬ್ಬರಗುಂಪಿ, ಅಳಗವಾಡಿ ನವಲಗುಂದ, ಶಲವಡಿ ಮೂಲಕ) | 112 |
| 57 | 57 | ಬಾಗಲಕೋಟೆ ಬಿಳಿಗಿರಿರಂಗನಬೆಟ್ಟ ರಾಜ್ಯ ಹೆದ್ದಾರಿ (ಬದಾಮಿ, ರೋಣ, ಹುಯಿಲಗೋಳ, ಗದಗ, ಶಿರಹಟ್ಟಿ, ಗುತ್ತಲ, ರಾಣೆಬೆನ್ನೂರು, ಮಾಸೂರು, ಶಿಕಾರಿಪುರ, ಶಿವಮೊಗ್ಗ, ಲಕ್ಕವಳ್ಳಿ, ತರೀಕೆರೆ, ಚಿಕ್ಕಮಗಳೂರು, ಬೇಲೂರು, ಹಾಸನ, ಹೊಳೆನರಸೀಪುರ, ಕೆ.ಆರ್.ನಗರ, ಬಿಳಿಕೆರೆ, ನಂಜನಗೂಡು, ಯಳಂದೂರು ಮೂಲಕ) | 662 |
| 58 | 58 | ಮೂಡಿಗೆರೆ ವೆಂಕಟಗಿರಿಕೋಟೆ ರಾಜ್ಯ ಹೆದ್ದಾರಿ (ಬೇಲೂರು, ಹಳೇಬೀಡು, ಬಾಣಾವರ, ಹುಲಿಯೂರು, ಸಿರಾ, ಗೌರಿಬಿದನೂರು, ಚಿಕ್ಕಬಳ್ಳಾಪುರ, ಚಿಂತಾಮಣಿ, ಶ್ರೀನಿವಾಸಪುರ, ಮುಳಬಾಗಿಲು ಮೂಲಕ) | 390 |
| 59 | 59 | ಕುಷ್ಟಗಿ ಪಟ್ಟದಕಲ್ ರಾಜ್ಯ ಹೆದ್ದಾರಿ | 52 |
| 60 | 60 | ಹುನಗುಂದ ಸುರಪುರ ರಾಜ್ಯ ಹೆದ್ದಾರಿ (ಹುನಗುಂದ, ತಾಳೀಕೋಟೆ, ಕೆಂಭಾವಿ ಮೂಲಕ) | 122 |
| 61 | 61 | ಮನಗೂಳಿ ಬಿಚ್ಚಳ ರಾಜ್ಯ ಹೆದ್ದಾರಿ (ಹೂವಿನ ಹಿಪ್ಪರಗಿ, ಬ.ಬಾಗೇವಾಡಿ, ದೇವಾಪುರ, ದೇವದುರ್ಗ, ಸಿರವಾರ, ನೀರಮಾನ್ವಿ, ಬೈಲಮಾರ್ಚಡ, ರಾಜೋಳಿಬಂಡಾ ಮೂಲಕ) | 221 |

| 1 | 2 | 3 | 4 |
|---|---|---|---|
| 62 | 62 | ಹಾವೇರಿ ಸಾಗರ ರಾಜ್ಯ ಹೆದ್ದಾರಿ (ಲಿಂಗಾಪುರ, ಚಿಕ್ಕೆರೂರ, ಹಿರೇಕೆರೂರ, ಶಿರಾಳಕೊಪ್ಪ ಮೂಲಕ) | 108 |
| 63 | 63 | ರಾರಾವಿ ಬೇಲೂರು ರಾಜ್ಯ ಹೆದ್ದಾರಿ (ಆಂಧ್ರಪ್ರದೇಶ ರಾಜ್ಯ ಗಡಿಯಿಂದ ಸಿರುಗುಪ್ಪ, ದೇಶನೂರು, ಗೋರೆಬಾಳ್, ಕಾರಟಗಿ, ಕನಕಗಿರಿ, ಯಲಬುರ್ಗಾ, ಸಂಕನೂರು, ಸೂಡಿ, ರಾಜೂರು ಮೂಲಕ) | 165 |
| 64 | 64 | ಕಡೂರು ಕನ್ನನಗಡ ರಾಜ್ಯ ಹೆದ್ದಾರಿ (ಚಿಕ್ಕಮಗಳೂರು, ಮೂಡಿಗೆರೆ, ಬೆಳ್ತಂಗಡಿ, ಬಂಟ್ವಾಳ, ಕಲ್ಲಡಕ ಮೂಲಕ) | 190 |
| 65 | 65 | ಬೇಗಾರ್ ಮೊಳಕಾಲ್ಮೂರು ರಾಜ್ಯ ಹೆದ್ದಾರಿ (ಕೊಪ್ಪ, ನರಸಿಂಹರಾಜಪುರ, ಸೂಲಗೇರಿ, ಭದ್ರಾವತಿ, ಚನ್ನಗಿರಿ, ಶಾಂತಿಸಾಗರ, ದಾವಣಗೆರೆ, ಜಗಳೂರು, ಮುಷ್ಟೂರು, ಬಿ.ಜಿ.ಕೆರೆ ಮೂಲಕ) | 297 |
| 66 | 66 | ಗಂಗಾಮೂಲ ಕೊಟಿಗೆಹಾರ ರಾಜ್ಯ ಹೆದ್ದಾರಿ (ಮಲ್ಲೇಶ್ವರ, ಕಳಸ, ಮಾಗುಂದಿ ಮೂಲಕ) | 94 |
| 67 | 67 | ಮಂಗಳೂರು ಅತ್ರಾಡಿ ರಾಜ್ಯ ಹೆದ್ದಾರಿ (ಬಾಜ್ಪೆ, ಕಟೀಲ್, ಬೆಳಮನೆ, ಕಾಪು, ಶಿರವಾ ಮೂಲಕ) | 72 |
| 68 | 68 | ತುಮಕೂರು ಹೊನ್ನಾವರ ಹಳೆಯ ರಾಜ್ಯ ಹೆದ್ದಾರಿಯ ಉಳಿದ ಭಾಗ (ಶಿವಮೊಗ್ಗ ಹಾಗೂ ಭದ್ರಾವತಿ ಪಟ್ಟಣ ಪ್ರದೇಶಗಳಲ್ಲಿ) | 12 |
| 69 | 69 | ಕುಮಟಾ ತಡಸ ರಾಜ್ಯ ಹೆದ್ದಾರಿ (ಶಿರಸಿ, ಮುಂಡಗೋಡ ಮೂಲಕ) | 139 |
| 70 | 70 | ಬೆಳ್ತಂಗಡಿ ಮುಲ್ಕಿ ರಾಜ್ಯ ಹೆದ್ದಾರಿ (ಮೂಡಬಿದ್ರಿ ಮೂಲಕ) | 57 |
| 71 | 71 | ತಿಪಟೂರು ಹಾಸನ ರಾಜ್ಯ ಹೆದ್ದಾರಿ (ದುದ್ದ ಮೂಲಕ) | 49 |
| 72 | 72 | ನಿಪ್ಪಾಣಿ ಕೊತ್ತಲಗಿ ರಾಜ್ಯಹೆದ್ದಾರಿ (ನನದಿ, ಎಕ್ಸಾಂಬಾ, ಉಗಾರ, ಮಂಗಸೂಳಿ, ಅಥಣಿ, ಐನಾಪುರ ಮೂಲಕ ಮಹಾರಾಷ್ಟ್ರ ರಾಜ್ಯ ಗಡಿಯವರೆಗೆ) | 135 |
| 73 | 73 | ಮಂಗಸೂಳಿ ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ (ಉಗಾರ, ಕುಡುಚಿ, ರಾಯಬಾಗ, ಕಬ್ಬೂರ, ಬೆಲ್ಲದ ಬಾಗೇವಾಡಿ, ಘಟಪ್ರಭ, ಗೊಡಚಿನಮಲ್ಕಿ, ಪಾಶ್ಚಾಪೂರ, ಅಕ್ಕತಂಗೇರಹಾಳ, ನೇಸರಗಿ, ಇಂಚಲ, ಬೈಲಹೊಂಗಲ, ಬೆಳವಡಿ, ಬುಡರಗಟ್ಟಿ, ತಡಕೋಡ, ಮಮ್ಮಿಗಟ್ಟಿ, ಧಾರವಾಡ, ರಾಷ್ಟ್ರೀಯ ಹೆದ್ದಾರಿ 4 ರ ಉಳಿಕೆ ಭಾಗ ಸೇರಿಸಿ ಹುಬ್ಬಳ್ಳಿ, ಕುಂದಗೋಳ ಮೂಲಕ) | 300 |
| 74 | 74 | ನೆಲಮಂಗಲ ಚಿಕ್ಕಬಳ್ಳಾಪುರ ರಾಜ್ಯ ಹೆದ್ದಾರಿ (ದೊಡ್ಡಬಳ್ಳಾಪುರ ಮೂಲಕ) | 63 |
| 75 | 75 | ಭಾಲ್ಕಿ ಚಿಂಚೋಳಿ ರಾಜ್ಯ ಹೆದ್ದಾರಿ (ಹುಮ್ನಾಬಾದ್, ಕಬೀರ್‌ವಾಡಿ, ಚಿಟಗುಪ್ಪ, ಐನಾಪುರ ಮೂಲಕ) | 81 |
| 76 | 76 | ಬೀರೂರು ಸಮ್ಮಸಗಿ ರಾಜ್ಯ ಹೆದ್ದಾರಿ (ಅಜ್ಜಂಪುರ, ಶಿವನಿ, ಚನ್ನಗಿರಿ, ಸಂತೆಬೆನ್ನೂರು, ದಾವಣಗೆರೆ, ಹರಿಹರ, ಕೋಡ, ತಿಳವಳ್ಳಿ ಮೂಲಕ | 212 |
| 77 | 77 | ಶಿರಸಿ ಹೊಸನಗರ ರಾಜ್ಯ ಹೆದ್ದಾರಿ (ಸೊರಬ, ಮಾಸೂರು, ಬೆಟ್ಟಮಲ್ಲಪ್ಪ, ಆನಂದಪುರ ಮೂಲಕ) | 111 |
| 78 | 78 | ಶೆಟ್ಟಿಹಳ್ಳಿ ಇಚಲಕರಂಜಿ ರಾಜ್ಯ ಹೆದ್ದಾರಿ (ಮಹಾರಾಷ್ಟ್ರ ರಾಜ್ಯ ಗಡಿಯಿಂದ ದಡ್ಡಿ, ಹತ್ತರಗಿ, ಹುಕ್ಕೇರಿ, ಚಿಕ್ಕೋಡಿ, ಎಕ್ಸಾಂಬಾ, ಸದಲಗಾ, ಬೋರಗಾಂವ್ ಮೂಲಕ ಮಹಾರಾಷ್ಟ್ರ ರಾಜ್ಯ ಗಡಿಯವರೆಗೆ | 88 |
| 79 | 79 | ಶ್ರೀರಂಗಪಟ್ಟಣ ಮಲೈಮಹದೇಶ್ವರ ರಾಜ್ಯ ಹೆದ್ದಾರಿ (ಸೊಸಲೆ, ತಿರುಮಕೂಡ್ಲು ನರಸೀಪುರ, ಮಾದಾಪುರ, ಕೊಳ್ಳೇಗಾಲ, ರಾಮಾಪುರ, ಕೋಡಳ್ಳಿ, ಹನೂರು, ಪಾಲಾರ್ ಮೂಲಕ ತಮಿಳುನಾಡು ರಾಜ್ಯ ಗಡಿಯವರೆಗೆ) | 149 |
| 80 | 80 | ನಂಜನಗೂಡು ಬಿಳಿಗಿರಿರಂಗನಬೆಟ್ಟ ರಾಜ್ಯ ಹೆದ್ದಾರಿ (ಚಾಮರಾಜನಗರ, ಬ್ಯಾತದೇವರಗುಡಿ ಮೂಲಕ) | 86 |
| 81 | 81 | ಯಳಂದೂರು ಬಂಡೀಪುರ ರಾಜ್ಯ ಹೆದ್ದಾರಿ (ಹೊಂಗನೂರು, ಚಾಮರಾಜನಗರ, ತೆರಕಣಾಂಬಿ, ಗುಂಡ್ಲುಪೇಟೆ ಮೂಲಕ) | 81 |
| 82 | 82 | ಹೊಸಕೋಟೆ ದೋನಿಪಲ್ಲಿ ರಾಜ್ಯ ಹೆದ್ದಾರಿ (ಚಿಂತಾಮಣಿ ಮೂಲಕ ಆಂಧ್ರ ಪ್ರದೇಶ ರಾಜ್ಯ ಗಡಿಯವರೆಗೆ) | 88 |
| 83 | 83 | ಚಂದರಗಿ ಕೋಟುಮಚಗಿ ರಾಜ್ಯ ಹೆದ್ದಾರಿ (ಕಡಕೋಳ, ಗೊಡಚಿ, ಸಾಲಹಳ್ಳಿ, ಕೊಣ್ಣೂರು ಶಿರೋಳ, ಹೊಳೆಆಲೂರು, ರೋಣ, ಅಬ್ಬೀಗೆರೆ ಮೂಲಕ) | 112 |
| 84 | 84 | ಶಿರಾ ನಂಜನಗೂಡು ರಾಜ್ಯ ಹೆದ್ದಾರಿ (ಗುಬ್ಬಿ, ಕಲ್ಲೂರು, ಎಡೆಯೂರು, ಅಮೃತೂರು, ಮಂಡ್ಯ, ಕಿರುಗಾವಲು, ಹೊಸವತ್ತಿ, ಟಿ.ನರಸೀಪುರ ಮೂಲಕ) | 229 |

| 1 | 2 | 3 | 4 |
|---|---|---|---|
| 85 | 85 | ಬೆಂಗಳೂರು ಜಲಸೂರು ರಾಜ್ಯ ಹೆದ್ದಾರಿ (ಮಾಗಡಿ, ಹುಲಿಯೂರುದುರ್ಗ, ಕೌಡ್ಲೆ, ನಾಗಮಂಗಲ, ಕೆ.ಆರ್.ಪೇಟೆ, ಸಾಲಿಗ್ರಾಮ, ರಾಮನಾಥಪುರ, ಸೋಮವಾರಪೇಟೆ, ಒಣಗೂರು, ಸುಬ್ರಮಣ್ಯ ಮೂಲಕ ಕೇರಳ ರಾಜ್ಯ ಗಡಿಯವರೆಗೆ) | 326 |
| 86 | 86 | ರಾಮನಾಥಪುರ ತೆರಕಣಾಂಬಿ ರಾಜ್ಯ ಹೆದ್ದಾರಿ (ಬಚ್ಚೇಹಳ್ಳಿ, ಕಟ್ಟೆಮಳಲವಾಡಿ, ಹುಣಸೂರು, ಹೆಚ್.ಡಿ.ಕೋಟೆ, ಸರಗೂರು, ಬೀರ್ವಾಳ, ಬೇಗೂರು, ಮೂಡಾಪಟ್ಟಣ ಮೂಲಕ) | 154 |
| 87 | 87 | ಬೆಂಗಳೂರು ಆನೇಕಲ್ ರಾಜ್ಯ ಹೆದ್ದಾರಿ (ಬನ್ನೇರುಘಟ್ಟ ಮೂಲಕ) | 49 |
| 88 | 88 | ಮೈಸೂರು ಬಂಟ್ವಾಳ ರಾಜ್ಯ ಹೆದ್ದಾರಿ (ಹುಣಸೂರು, ಪಿರಿಯಾಪಟ್ಟಣ, ಕುಶಾಲನಗರ, ಮಡಿಕೇರಿ, ಸುಳ್ಯ ಪುತ್ತೂರು ಮೂಲಕ) | 220 |
| 89 | 89 | ಮಡಿಕೇರಿ ಕುಟ್ಟಾ ರಾಜ್ಯ ಹೆದ್ದಾರಿ (ಸಿದ್ದಾಪುರ, ಘಟ್ಟತಳ, ಚನ್ನಯ್ಯನಕೋಟೆ, ಅತ್ತೂರು, ಗೋಣಿಕೊಪ್ಪಲು ಮೂಲಕ) | 98 |
| 90 | 90 | ಹುಣಸೂರು ತಲಕಾವೇರಿ ರಾಜ್ಯ ಹೆದ್ದಾರಿ (ವಿರಾಜಪೇಟೆ, ನಾಪೋಕ್ಲು, ನಾಲ್ಕುನಾಡು, ಭಾಗಮಂಡಲ ಮೂಲಕ) | 113 |
| 91 | 91 | ಕೊಣನೂರು ಮಕುಟ್ಟಾ ರಾಜ್ಯ ಹೆದ್ದಾರಿ (ಕುಶಾಲನಗರ, ರಾಮನಾಥಪುರ, ಸಿದ್ದಾಪುರ ವಿರಾಜಪೇಟೆ ಮೂಲಕ) | 90 |
| 92 | 92 | ಕನಕಪುರ ಸಂಗಮ ರಾಜ್ಯ ಹೆದ್ದಾರಿ (ತಮಿಳುನಾಡು ರಾಜ್ಯ ಗಡಿಯವರೆಗೆ) | 30 |
| 93 | 93 | ಖಾನಾಪುರ ತಾಳಗುಪ್ಪ ರಾಜ್ಯ ಹೆದ್ದಾರಿ (ಹಳಿಯಾಳ, ಎಲ್ಲಾಪುರ, ಶಿರಸಿ, ಸಿದ್ದಾಪುರ ಮೂಲಕ) | 196 |
| 94 | 94 | ಬಾಗೇಪಲ್ಲಿ ಹಲಗೂರು ರಾಜ್ಯ ಹೆದ್ದಾರಿ (ಗುಡಿಬಂಡೆ, ತೊಂಡೇಭಾವಿ, ಮಾವತ್ತೂರು, ಕೊಲಾಲ, ಉರಡಿಗೆರೆ, ಕ್ಯಾತಸಂದ್ರ, ನೇರಳಾಪುರ, ಕುದೂರು, ಮಾಗಡಿ, ರಾಮನಗರ, ಚನ್ನಪಟ್ಟಣ ಮೂಲಕ) | 232 |
| 95 | 95 | ಹೊಸಕೋಟೆ ವೆಂಕಟಗಿರಿಕೋಟೆ ರಾಜ್ಯ ಹೆದ್ದಾರಿ (ಮಾಲೂರು, ಟೇಕಲ್, ಬಂಗಾರಪೇಟೆ, ಬೂದಿಗೆರೆ ಮೂಲಕ) | 84 |
| 96 | 96 | ದೇವನಹಳ್ಳಿ ಕೆಂಪಾಪುರ ರಾಜ್ಯ ಹೆದ್ದಾರಿ (ವಿಜಯಪುರ, ವೇಮಗಲ್, ಕೋಲಾರ, ಘಟ್ಟಕಾಮದೇನಹಳ್ಳಿ ಕೆ.ಜಿ.ಎಫ್ ಮೂಲಕ) | 68 |
| 97 | 97 | ಸಂಕೇಶ್ವರ ಸದಲಗಾ ರಾಜ್ಯ ಹೆದ್ದಾರಿ (ಕೌತಳ್ಳಿ, ನಿಪ್ಪಾಣಿ, ಬೆಡಕಿಹಾಳ ಮೂಲಕ) | 47 |
| 98 | 98 | ಭಟನಾಗೂರು ಬೋರಗಾಂವ್‌ವಾಡಿ ರಾಜ್ಯ ಹೆದ್ದಾರಿ (ಬಾರವಾಡ, ಮನಗೂರ, ಕಾರಗಡ ಮೂಲಕ | 43 |
| 99 | 99 | ಕೊತ್ತಪಲ್ಲಿ ಮಾಸ್ತಿ ರಾಜ್ಯ ಹೆದ್ದಾರಿ (ಗೌನಪಲ್ಲಿ, ರಾಜಪಲ್ಲಿ, ಶ್ರೀನಿವಾಸಪುರ, ಕೋಲಾರ, ಟೇಕಲ್, ಮೂಲಕ) | 103 |
| 100 | 100 | ಸುಬ್ರಮಣ್ಯ ಮಂಜೇಶ್ವರ ರಾಜ್ಯ ಹೆದ್ದಾರಿ (ಪುತ್ತೂರು, ಪರ್ಲಡಕ, ಉಕ್ಕುಡ ಮೂಲಕ) | 89 |
| 101 | 101 | ಸುರತ್ಕಲ್ ಕಬಕ ರಾಜ್ಯ ಹೆದ್ದಾರಿ (ಬಾಜ್ಪೆ, ಗುರುಪುರ, ಬಂಟ್ವಾಳ, ಪಾಣೆಮಂಗಳೂರು, ವಿಟಲ ಮೂಲಕ) | 74 |
| 102 | 102 | ಹುಲಿಯಾರು ಕೇರಳಾಪುರ ರಾಜ್ಯ ಹೆದ್ದಾರಿ (ಜಯಚಾಮರಾಜಪುರ, ಅರಸೀಕೆರೆ, ಹಾರನಹಳ್ಳಿ, ಶಾಂತಿಗ್ರಾಮ, ಹರಿಹರಪುರ, ಹೊಳೇನರಸಿಪುರದ ಜಕ್ಕನಹಳ್ಳಿ ಮೂಲಕ) | 124 |
| 103 | 103 | ಗೋಕಾಕ ಸವದತ್ತಿ ರಾಜ್ಯ ಹೆದ್ದಾರಿ (ರಾಜ್ಯ ಹೆದ್ದಾರಿ 31 ರಿಂದ ಮುರಗೋಡ, ಕರಿಮನಿ, ಸೊಗಲಕ್ಷೇತ್ರ, ಮುನೋಳಿ, ಮಲಪ್ರಭ, ಗೊರವನಕೊಳ್ಳ ಮೂಲಕ ರಾಜ್ಯ ಹೆದ್ದಾರಿ 65ರವರೆಗೆ) | 67 |
| 104 | 104 | ಬೆಂಗಳೂರು ನಂದಿ ರಾಜ್ಯ ಹೆದ್ದಾರಿ (ಕಾಡುಗೊಂಡನಹಳ್ಳಿ, ನಾಗವಾರ, ಥಣಿಸಂದ್ರ, ಬೆಳ್ಳಹಳ್ಳಿ, ಕಣ್ಣೂರು, ಬಾಗಲೂರು, ಅರಿಶಿನಕುಂಟೆ, ದೇವನಹಳ್ಳಿ, ಮಲ್ಲಿಗೇನಹಳ್ಳಿ, ಕಾರಹಳ್ಳಿ ಮೂಲಕ) | 50 |
| 105 | 105 | ಹುಮ್ನಾಬಾದ್ ಬೀದರ್ ರಾಜ್ಯ ಹೆದ್ದಾರಿ (ಹಳೆಯ ಶ್ರೀರಂಗಪಟ್ಟಣ ಬೀದರ್ ರಾಜ್ಯ ಹೆದ್ದಾರಿಯ ಉಳಿಕೆ ಭಾಗ) | 47 |

**ಆರ್.ಮಂಜುಳ**

ಪಿ.ಆರ್. 515

ಸರ್ಕಾರದ ಅಧೀನ ಕಾರ್ಯದರ್ಶಿ (ನಬಾರ್ಡ್)

ಲೋಕೋಪಯೋಗಿ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ :** ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಾಇ 62 ಇಟಿಐ 2000 ದಿನಾಂಕ: 24.8.2000.
2. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ:ಉತನಿ:ತ:ಯೋ-1: ವಿವ-28: 2002-03 ದಿನಾಂಕ: 19.9.2002.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯ ವೃತ್ತಿ ಪರಿಷತ್ತನ್ನು ದಿನಾಂಕ: 24.8.2000 ರಿಂದ ಎರಡು ವರ್ಷಗಳ ಅವಧಿಗೆ ಪುನರ್ ರಚಿಸಿ ಆದೇಶ ಹೊರಡಿಸಲಾಗಿದೆ.

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇವರು ವರದಿ ಮಾಡುತ್ತಾ, ಹೊಸ ಸಮಿತಿಯನ್ನು ರಚಿಸಲು ಪ್ರಸ್ತಾಪಿಸಿ, ರಾಜ್ಯದಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸುವ ಕುಶಲ ಕರ್ಮಿ ತರಬೇತಿ ಯೋಜನೆಯನ್ನು ಕೇಂದ್ರ ಸರ್ಕಾರದ ನಿಯಮಾನುಸಾರ ಅನುಷ್ಠಾನಗೊಳಿಸಬೇಕಾಗಿದ್ದು, ಇಲಾಖೆಯ ತರಬೇತಿ ಕಾರ್ಯಕ್ರಮಗಳ ಬಗ್ಗೆ ಪರಿಶೀಲಿಸಿ ಹಾಗೂ ಭವಿಷ್ಯದ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಮಾರ್ಗದರ್ಶನ ಮತ್ತು ಸಲಹೆಗಳನ್ನು ನೀಡುವ ಸಲುವಾಗಿ ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತನ್ನು ಪುನಃ ರಚಿಸಲು ಕೋರಿ ಸದಸ್ಯರ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 238 ಇಟಿಐ 2002, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2004**

ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತನ್ನು ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿರುವ ಸದಸ್ಯರೊಂದಿಗೆ ಎರಡು ವರ್ಷಗಳ ಅವಧಿಗೆ ಪುನಃ ರಚಿಸಿ ಈ ಮೂಲಕ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯುಎಲ್ 185 ಇಟಿಐ 89 ದಿನಾಂಕ: 28.03.1990ರಲ್ಲಿ ನಮೂದಿಸಿದಂತೆ ಈ ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತಿನ ಕಾರ್ಯ ಚಟುವಟಿಕೆಗಳನ್ನು ಪಾಲಿಸುವುದು.

ಮೇಲ್ಕಂಡ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2230-ಕಾರ್ಮಿಕ ಮತ್ತು ಉದ್ಯೋಗ 0-2 ಉದ್ಯೋಗ ತರಬೇತಿ ನಿರ್ದೇಶನ ಮತ್ತು ಆಡಳಿತ-02 ರಾಜ್ಯ ವೃತ್ತಿ ಶಿಕ್ಷಣ ಪರಿಷತ್ತು (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಸುಬ್ರಮಣ್ಯರಾವ್**
ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ).

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಕಾಇ 238 ಇಟಿಐ 2002 ದಿನಾಂಕ: 26ನೇ ಏಪ್ರಿಲ್ 2004**

**ರಾಜ್ಯ ವೃತ್ತಿ ಶಿಕ್ಷಣ ಪರಿಷತ್ ಸದಸ್ಯರ ಪಟ್ಟಿ**

| | | | |
|---|---|---|---|
| 1) | ಮಾನ್ಯ ಕಾರ್ಮಿಕ ಸಚಿವರು | .... | ಅಧ್ಯಕ್ಷರು |
| 2) | ಸರ್ಕಾರದ ಪ್ರಧಾನ ಕಾರ್ಯದರ್ಶಿ ಕಾರ್ಮಿಕ ಇಲಾಖೆ ಅಥವಾ ಅವರ ಪ್ರತಿನಿಧಿ | ..... | ಉಪಾಧ್ಯಕ್ಷರು |
| 3) | ಆಯುಕ್ತರು ಉದ್ಯೋಗ ಮತ್ತು ತರಬೇತಿ ಇಲಾಖೆ | ..... | ಸದಸ್ಯ ಕಾರ್ಯದರ್ಶಿ, |
| | **ಸರ್ಕಾರದ ಪ್ರತಿನಿಧಿಗಳು** | | |
| 1) | ಸರ್ಕಾರದ ಕಾರ್ಯದರ್ಶಿ ಆರ್ಥಿಕ ಇಲಾಖೆ ಅಥವಾ ಅವರಿಂದ ನಾಮ ನಿರ್ದೇಶನ ಹೊಂದಿದವರು. | .... | ಸದಸ್ಯರು |
| 2) | ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಅಥವಾ ಅವರಿಂದ ನಾಮ ನಿರ್ದೇಶನ ಹೊಂದಿದವರು | ..... | ಸದಸ್ಯರು |
| 3) | ಮಹಾನಿರ್ದೇಶಕರು ಉದ್ಯೋಗ ಮತ್ತು ತರಬೇತಿ ಇಲಾಖೆ ಕೇಂದ್ರ ಸರ್ಕಾರ, ಇವರ ಪ್ರತಿನಿಧಿ | .... | ಸದಸ್ಯರು |
| 4) | ಕಾರ್ಮಿಕ ಸಂಘಟನೆಯ ಪ್ರತಿನಿಧಿ (ಒಬ್ಬರು) | ..... | ಸದಸ್ಯರು |
| 5) | ಕೈಗಾರಿಕಾ ಪ್ರತಿನಿಧಿ (ಒಬ್ಬರು) | .... | ಸದಸ್ಯರು |
| 6) | ಸಣ್ಣ ಪ್ರಮಾಣದ ಕೈಗಾರಿಕಾಗಳ ಪ್ರತಿನಿಧಿ (ಒಬ್ಬರು) | ..... | ಸದಸ್ಯರು |
| 7) | ವೃತ್ತಿಪರ ಅನುಭವಿ ಪ್ರತಿನಿಧಿ (ಒಬ್ಬರು) | .... | ಸದಸ್ಯರು |
| 8) | ತಾಂತ್ರಿಕ ಅನುಭವಿಗಳು (ಒಬ್ಬರು) | ..... | ಸದಸ್ಯರು |
| 1) | **ಕಾರ್ಮಿಕ ಸಂಘಟನೆಯಿಂದ**<br>ಶ್ರೀ ವಿ. ಜಿ. ಕೆ. ನಾಯರ್ ಅಧ್ಯಕ್ಷರು, ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ (ಸಿಐಟಿಯು) ಸಂಪಂಗಿರಾಮನಗರ, ಬೆಂಗಳೂರು | ..... | ಸದಸ್ಯರು |
| 2) | **ಕೈಗಾರಿಕೆ ಪ್ರತಿನಿಧಿಗಳು**<br>ಶ್ರೀ ಕೆ. ಕೆ. ಸ್ವಾಮಿ, ಉಪ ವ್ಯವಸ್ಥಾಪಕ ನಿರ್ದೇಶಕರು ಟಯೋಟಾ ಕಿರ್ಲೋಸ್ಕರ್ ಬೆಂಗಳೂರು | .... | ಸದಸ್ಯರು |
| 3) | **ಸಣ್ಣ ಕೈಗಾರಿಕೆಗಳ ಪ್ರತಿನಿಧಿ**<br>ಅಧ್ಯಕ್ಷರು, ಕಾಶಿಯಾ (ಕೆಎಸ್‌ಎಸ್‌ಐಎ) ಬೆಂಗಳೂರು | ..... | ಸದಸ್ಯರು |
| 4) | **ವೃತ್ತಿಪರ ಅನುಭವಿ ಪ್ರತಿನಿಧಿ**<br>ನಿರ್ದೇಶಕರು, ಗವರ್ನ್‌ಮೆಂಟ್ ಟೂಲ್ ರೂಮ್ ಅಂಡ್ ಟ್ರೈನಿಂಗ್ ಸೆಂಟರ್ (ಜಿಟಿಟಿಸಿ) ರಾಜಾಜಿನಗರ, ಬೆಂಗಳೂರು. | .... | ಸದಸ್ಯರು |

5) **ತಾಂತ್ರಿಕ ಅನುಭವಿಗಳು:**
ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಅಥವಾ ಅವರ ಪ್ರತಿನಿಧಿ ..... ಸದಸ್ಯರು

**ಎನ್. ಸುಬ್ರಮಣ್ಯರಾವ್**
ಪಿ.ಆರ್. 507 ಪೀಠಾಧಿಕಾರಿ, ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ).

## ಕಾನೂನು ಸಚಿವಾಲಯ

**ವಿಷಯ :** ಬೆಂಗಳೂರಿನ ವಿಶೇಷ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ (ಮಾರಾಟ ತೆರಿಗೆ) ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಲಾ 01 ಎಲ್‌ಎಸಿ 2002, ದಿನಾಂಕ: 18.5.2002
2. ಕರ್ನಾಟಕ ಉಚ್ಚನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರಸಂಖ್ಯೆ: ಜಿಓಬಿ:2-279: 2003, ದಿನಾಂಕ: 4.12.2003.

**ಪ್ರಸ್ತಾವನೆ:**

ಬೆಂಗಳೂರಿನ ವಿಶೇಷ ಮ್ಯಾಜಿಸ್ಟ್ರೇಟ್ ನ್ಯಾಯಾಲಯದ (ಮಾರಾಟ ತೆರಿಗೆ) ಕಾರ್ಯಾವಧಿಯನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದನ್ವಯ ದಿನಾಂಕ: 27.3.2004ಕ್ಕೆ ಪೂರ್ಣಗೊಂಡಿದೆ.

ಸದರಿ ನ್ಯಾಯಾಲಯದಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ ದಿನಾಂಕ: 28.3.2004 ರಿಂದ ಸದರಿ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ಖಾಯಂಗೊಳಿಸಲು ಮೇಲೆ ಓದಲಾದ (2) ರ ಪತ್ರದಲ್ಲಿ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಮೊದಲು ಒಂದು ವರ್ಷದ ಅವಧಿಗೆ ಮುಂದುವರೆಸಿ, ನಂತರ ಖಾಯಂಗೊಳಿಸುವ ಬಗ್ಗೆ ಪರಿಶೀಲಿಸಬಹುದೆಂದು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಲಾ 217 ಎಲ್‌ಎಸಿ 2003, ಬೆಂಗಳೂರು ದಿನಾಂಕ: 28ನೇ ಏಪ್ರಿಲ್ 2004**

ವಿಶೇಷ ಮ್ಯಾಜಿಸ್ಟ್ರೇಟ್ ನ್ಯಾಯಾಲಯ (ಮಾರಾಟ ತೆರಿಗೆ) ಬೆಂಗಳೂರು, ಇದರ ಕಾರ್ಯಾವಧಿಯನ್ನು ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 28.3.2004 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಈ ಎರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01- ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**
ಪಿ.ಆರ್. 510 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ರಮೇಶ್ ಪಿ ಭರಸ್ಕಳೆ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರನ್ನು ಅಮಾನತ್ತಿನಲ್ಲಿಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರ ಪತ್ರದ ಸಂ.ಜಿಪಂಅ/ಮಮಕ/ಸಿಬ್ಬಂದಿ/ಸಿಆರ್/97/03–04 ದಿನಾಂಕ:23–4–2004.

**ಪ್ರಸ್ತಾವನೆ:**

ಮೇಲೆ ಓದಲಾದ ದಿ:23–4–2004ರ ಪತ್ರದಲ್ಲಿ ಮುಖ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಜಿಲ್ಲೆ ಇವರ ವಿರುದ್ಧ ಈ ಕೆಳಕಂಡ ಆರೋಪಗಳನ್ನು ಸರ್ಕಾರಕ್ಕೆ ಸಲ್ಲಿಸಿ, ಶ್ರೀಯುತರನ್ನು ಅಮಾನತ್ತಿನಲ್ಲಿಡಲು ಅಗತ್ಯ ಕ್ರಮ ಕೈಗೊಳ್ಳುವಂತೆ ಸರ್ಕಾರವನ್ನು ಕೋರಿರುತ್ತಾರೆ.

1) ಶ್ರೀ ರಮೇಶ್ ಪಿ ಭರಸ್ಕಳೆ, ಉಪ ನಿರ್ದೇಶಕರು, ಬಾಗಲಕೋಟೆ ಜಿಲ್ಲೆ. ಇವರು ಕಛೇರಿಯ ಸಿಬ್ಬಂದಿಯನ್ನು ನಿಯೋಜಿಸುವ ಪೂರ್ವದಲ್ಲಿ ಸರ್ಕಾರದ ಅಧಿಸೂಚನೆ ದಿನಾಂಕ:3–3–2004 ರಲ್ಲಿನ ಸೂಚನೆಗಳನ್ನು ಪಾಲಿಸದೇ ಹಾಗೂ ಜಿಲ್ಲಾ ಚುನಾವಣಾಧಿಕಾರಿಗಳ ಪೂರ್ವಾನುಮತಿ ಪಡೆಯದೇ ಚುನಾವಣೆ ನೀತಿ ಸಂಹಿತೆಯನ್ನು ಉಲ್ಲಂಘಿಸಿ ಕರ್ತವ್ಯ ಲೋಪ ಎಸಗಿರುವುದು ಸ್ಪಷ್ಟವಾಗಿದೆಯೆಂದು ತಿಳಿಸಿರುತ್ತಾರೆ.

2) ಶ್ರೀ ಅಶೋಕ್ ಕೆಳವಾಡಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಹುನಗುಂದ. ಇವರನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣಾಧಿಕಾರಿ ಹುದ್ದೆಗೆ ಪ್ರಭಾರ ವಹಿಸಿಕೊಳ್ಳುವಂತೆ ದಿನಾಂಕ:26–3–2004ರಲ್ಲಿ ಆದೇಶ ಹೊರಡಿಸಿರುವುದೂ ಸಹ ಚುನಾವಣಾ ನೀತಿ ಸಂಹಿತೆಯನ್ನು ಉಲ್ಲಂಘಿಸಲಾಗಿದೆ. ಜಿಲ್ಲಾಧಿಕಾರಿಗಳ ಅನುಮತಿ ಪಡೆಯದೇ ಶ್ರೀಮತಿ ದಾನಮ್ಮ ಚಂದ್ರಶೇಖರಪ್ಪ ಬೆಟಗೇರಿ ಇವರನ್ನು ನಿಯಮಗಳಲ್ಲಿ ಅವಕಾಶ ಇಲ್ಲದೇ ಇದ್ದರೂ ಸಹ ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಿ ನಿಯಮಗಳನ್ನು ಉಲ್ಲಂಘಿಸಿರುತ್ತಾರೆ.

3) ಸರ್ಕಾರದ ಸುತ್ತೋಲೆಯ ಪ್ರಕಾರ ಅಂಗನವಾಡಿ ಕಾರ್ಯಕರ್ತೆಯರನ್ನು ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಲು ಅವಕಾಶವಿರುವುದಿಲ್ಲ ಎಂಬ ಅಂಶವು ಇಲಾಖಾ ಅಧಿಕಾರಿಗಳಿಗೆ ತಿಳಿದಿದ್ದರೂ ಸಹ, ಸದರಿ ಅಧಿಕಾರಿಗಳು ಇಲಾಖಾ ಸುತ್ತೋಲೆಯನ್ನು ತಿರಸ್ಕರಿಸಿರುವುದು ಹಾಗೂ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ

ಕಾರ್ಯಕರ್ತೆಯರ ನೇಮಕಾತಿ ಮಾಡಿಕೊಳ್ಳಬೇಕಾದರೆ ಅಧ್ಯಕ್ಷರು, ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿ ಪ್ರಾಧಿಕಾರ ಹಾಗೂ ಉಪಕಾರ್ಯದರ್ಶಿ ಜಿಲ್ಲಾ ಪಂಚಾಯತ್, ಬಾಗಲಕೋಟೆರವರ ಅನುಮೋದನೆ ಪಡೆಯದೇ ಹಳ್ಳೂರು ಗ್ರಾಮ, ಖಜ್ಜಿಡೋಣಿ ಗ್ರಾಮಗಳಲ್ಲಿ ಅಂಗನವಾಡಿ ಕಾರ್ಯಕರ್ತೆಯರನ್ನು ನೇಮಕಾತಿ ಮಾಡಿರುತ್ತಾರೆ.

4) ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ತಮ್ಮ ವ್ಯಾಪ್ತಿಯಲ್ಲಿ ಬರುವ ಪ್ರತಿಯೊಂದು ತಾಲ್ಲೂಕಿನ ಶಿಶು ಅಭಿವೃದ್ಧಿ ಯೋಜನೆಗಳಿಗೆ ಕೊಟೇಶನ್ ಕರೆದು ಅವರವರ ಕಾರ್ಯಾಲಯಕ್ಕೆ ಬೇಕಾದ ಅಲ್ಮೇರಾ, ಟೇಬಲ್ ಮತ್ತು ಖುರ್ಚಿಗಳನ್ನು ಇತ್ಯಾದಿಗಳನ್ನು ರಿಜಿಸ್ಟ್ರೇಶನ್ ಆಗದೇ ಇರುವ ಫರ್ಮನಲ್ಲಿ ಖರೀದಿಸಿದ್ದು, ಯಾದವಾಡ, ಗೋಕಾಕ ತಾಲ್ಲೂಕು, ಬೆಳಗಾಂ ಜಿಲ್ಲೆಯ ಒಂದೇ ಫರ್ಮನಲ್ಲಿ ಎಲ್ಲಾ ಸಾಮಾಗ್ರಿಗಳನ್ನು ಖರೀದಿಸಲಾಗಿದ್ದು, ಈ ಸಂಬಂಧದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಬಿಇಎಂ 2003 ದಿನಾಂಕ: 29-9-2003ರನ್ವಯ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಪೀಠೋಪಕರಣಗಳನ್ನು ಖರೀದಿಸಲು ಅವಕಾಶ ಇಲ್ಲದೇ ಇದ್ದರೂ ಸಹ ಹಾಗೂ ಜಿಲ್ಲಾ ಪಂಚಾಯತ್‌ನ ಅನುಮತಿ ಪಡೆಯದೇ ಪೀಠೋಪಕರಣಗಳನ್ನು ಖರೀದಿಸಿ ಕರ್ತವ್ಯಲೋಪ ಎಸಗಿದ್ದಾರೆ.

5) ಜಿಲ್ಲಾ ಪಂಚಾಯತ್, ಬಾಗಲಕೋಟೆಯಲ್ಲಿ ಈ ಕೆಳಕಂಡ ದಿನಗಳಂದು ನಡೆದ ವಿವಿಧ ಸಭೆಗಳಿಗೆ ಯಾವುದೇ ರೀತಿಯ ಅನುಮತಿ ಪಡೆಯದೇ ಸದರಿ ಸಭೆಗಳಿಗೆ ಗೈರು ಹಾಜರಾಗಿರುವುದು. ಈ ಕುರಿತು ಅವರಿಗೆ ನೋಟೀಸ್ ಸಹ ನೀಡಿದ್ದು ಈ ಬಗ್ಗೆ ಯಾವುದೇ ಸಮಂಜಸ ಉತ್ತರವನ್ನು ಲಿಖಿತ ಹೇಳಿಕೆಯಲ್ಲಿ ನೀಡಿರುವುದಿಲ್ಲ.

1)ದಿ:11-2-2004 ಕೆ.ಡಿ.ಪಿ ಸಭೆ,
2)ದಿ:11-4-2004 ಕೆ.ಡಿ.ಪಿ. ಸಭೆ
3)ದಿ:9-12-2003 ಸಾಮಾನ್ಯ ಸಭೆ
4)ದಿ:16-2-2004 ಸಾಮಾನ್ಯ ಸಭೆ
5)ದಿ:25-11-2003 ಹಣಕಾಸು ಸ್ಥಾಯಿ ಸಮಿತಿ ಸಭೆ.

6) ದಿನಾಂಕ:7-4-2004ರಲ್ಲಿ ಇವರ ಕಾರ್ಯಾಲಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ನಗದು ಪುಸ್ತಕವನ್ನು ಪರಿಶೀಲಿಸಲಾಗಿ ದಿನಾಂಕ 31-3-2000ಕ್ಕೆ 2003-04ನೇ ಆರ್ಥಿಕ ವರ್ಷದ ಲೆಕ್ಕವನ್ನು ಮುಕ್ತಾಯ ಮಾಡದೇ ಇರುವುದು ಹಾಗೂ ನಗದು ಪುಸ್ತಕವನ್ನು ಪ್ರತಿ ದಿನ ಬರೆದು ಪೂರ್ಣಗೊಳಿಸಿ ಅಧಿಕಾರಿಯ ರುಜುವನ್ನು ಪಡೆಯದೇ ಇರುವುದು ಮತ್ತು ಈ ಕಛೇರಿಯಲ್ಲಿ 7 ದಿನಗಳವರೆಗೆ ನಗದು ಪುಸ್ತಕವನ್ನು ಬರೆಯದೇ ಇರುವುದು ಹಾಗೂ ಜಿಲ್ಲೆಯಲ್ಲಿ 2 ಅಂಗನವಾಡಿ ಕೇಂದ್ರಗಳಿದ್ದು, ಅದರಲ್ಲಿ ಅಮಿನಗಡ ಅಂಗನವಾಡಿ ತರಬೇತಿ ಕೇಂದ್ರದ ಎಲ್ಲ ಚೆಕ್ಕುಗಳನ್ನು ದಿನಾಂಕ:31-3-2004ರಂದೇ ವಿತರಿಸಿದ್ದು ಗುಳೇದಗುಡ್ಡದ ಅಂಗನವಾಡಿ ಕೇಂದ್ರಕ್ಕೆ ಸಂಬಂಧಿಸಿದ ಚೆಕ್ಕನ್ನು ದಿ: 7-4-2004ರವರೆಗೆ ವಿತರಣೆ ಮಾಡದೇ ಇಟ್ಟುಕೊಂಡಿರುವುದು ಉದ್ದೇಶಪೂರ್ವಕವಾಗಿಯೇ ತಡೆಹಿಡಿದಿರುತ್ತಾರೆ ಎಂಬ ಸಂಶಯಕ್ಕೆ ಆಸ್ಪದವಾಗಿರುತ್ತದೆ.

7) ಕಛೇರಿ ಮುಖ್ಯಸ್ಥರಾದ ಶ್ರೀಯುತರು ಜಿಲ್ಲಾ ಪಂಚಾಯತಿಯ ಪೂರ್ವಾನುಮತಿ ಇಲ್ಲದೇ ಅನೇಕ ಬಾರಿ ಬಾಗಲಕೋಟೆಯಿಂದ ವಿಮಾನದಲ್ಲಿ ಪ್ರಯಾಣ ಮಾಡಿರುವುದು ಹಾಗೂ ಕಛೇರಿಯ ವಾಹನವನ್ನು ಬಾಗಲಕೋಟೆಯಿಂದ ಬಿಜಾಪುರಕ್ಕೆ ಮುಂಗಡ ಟಿಕೇಟನ್ನು ಪಡೆಯಲು ಕಾರ್ಯಾಲಯದ ವಾಹನವನ್ನು ಕಳುಹಿಸಿರುವುದು ಹಾಗೂ ವಿಮಾನದ ದರವನ್ನು ತಮ್ಮ ಹಂತದಲ್ಲಿಯೇ ಮುಂಗಡ ಆದೇಶವನ್ನು ಮಾಡಿ ಹಣವನ್ನು ಪಡೆದುಕೊಂಡಿರುತ್ತಾರೆ. ಈ ರೀತಿ ತಮ್ಮ ಅಧಿಕಾರವನ್ನು ಆರ್ಥಿಕ ಇಲಾಖೆಯು ಹೊರಡಿಸಿರುವ ದಿ:25-8-2003ರ ಆದೇಶವನ್ನು ಉಲ್ಲಂಘನೆ ಮಾಡಿರುವುದು ಸ್ಪಷ್ಟವಾಗಿರುತ್ತದೆ.

8) ಸ್ತ್ರೀ ಶಕ್ತಿ ಯೋಜನೆಗೆ ಸಂಬಂಧಿಸಿದಂತೆ ಅಕೌಂಟ್‌ನಿಂದ ದಿನಾಂಕ: 7-4-2004ರಂದು ರೂ. 22,000ಗಳನ್ನು ಡ್ರಾ ಮಾಡಿರುವುದು ಹಾಗೂ ಯೋಜನೆಗೆ ಸಂಬಂಧಿಸಿದಂತೆ ಯಾವುದೇ ನಗದು ಪುಸ್ತಕಗಳನ್ನು ಪ್ರಾರಂಭ ಮಾಡದೇ ಇರುವುದು ಇದರಿಂದಾಗಿ ಚೆಕ್‌ಗಳಲ್ಲಿ ಏರುಪೇರಾಗುವ ಸಾಧ್ಯತೆ ಇದ್ದು, ಇದರಲ್ಲಿಯೂ ಸಹ ನಿಯಮ ಉಲ್ಲಂಘನೆ ಮಾಡಿರುವುದು ಸ್ಪಷ್ಟವಾಗಿರುತ್ತದೆ.

9) ಈ ಅಧಿಕಾರಿಗಳ ಕಾರ್ಯದಲ್ಲಿ ಕಂಡು ಬಂದಿರುವ ನ್ಯೂನತೆಗಳ ಬಗ್ಗೆ ಕರ್ನಾಟಕ ರಾಜ್ಯ ಅಂಗನವಾಡಿ ಕಾರ್ಯಕರ್ತೆಯರ ಮತ್ತು ಸಹಾಯಕಿಯರ ಸಂಘ(ರಿ) ತಾಲ್ಲೂಕು, ಬಾಗಲಕೋಟೆ ಇವರು ದಿನಾಂಕ: 10-4-2004ರಂದು ಜಿಲ್ಲಾ ಪಂಚಾಯತ್ ಕಾರ್ಯಾಲಯದ ಎದುರು ಧರಣಿ ಸತ್ಯಾಗ್ರಹ ಹೂಡಲು ಅವಕಾಶ ಮಾಡಿ ಕೊಟ್ಟಿರುತ್ತಾರೆ. ಅವರುಗಳಿಗೆ ನೀಡಲಾಗುತ್ತಿರುವ ಗೌರವಧನವನ್ನು ಸಮಯಕ್ಕೆ ಸರಿಯಾಗಿ ಪಾವತಿ ಮಾಡದೇ ಸಿಬ್ಬಂದಿಗಳಿಗೆ ತೊಂದರೆ ನೀಡುತ್ತಿದ್ದಾರೆ.

ಮೇಲೆ ವಿವರಿಸಿದ ಕಾರಣಗಳಿಂದಾಗಿ, ಶ್ರೀ ರಮೇಶ್ ಪಿ ಭರಸ್ಕಳೆ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರನ್ನು ಕೂಡಲೇ ಅಮಾನತ್ತಿನಲ್ಲಿಡುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್, ಬಾಗಲಕೋಟೆ ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದು ಶ್ರೀಯುತರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವ ಕುರಿತು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂ. 489 ಎಸ್‌ಜೆಡಿ 2003 ಬೆಂಗಳೂರು ದಿನಾಂಕ: 7ನೇ ಮೇ 2004**

ಮೇಲೆ ವಿವರಿಸಿದ ಕಾರಣಗಳಿಂದಾಗಿ ಶ್ರೀ ರಮೇಶ್ ಪಿ. ಭರಸ್ಕಳೆ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಎ)ರ ಮೇರೆಗೆ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಶ್ರೀಯುತರು ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಅಮಾನತ್ತಿನ ಅವಧಿಯಲ್ಲಿ ಸಕ್ರಮ ಪ್ರಾಧಿಕಾರಿರವರ ಪೂರ್ವಾನುಮತಿ ಇಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 501

ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.